॥ ಶ್ರೀಃ ॥

ಶ್ರೀ ಶಿವಾಚಾರ್ಯರ್ಶ್ರೀಮಂಗಲಮಸ್ತು

# ಷಟ್ಸ್ಥಲಕೌಮುದೀ

## ಎಂಬೀಗ್ರನ್ಥವು



ಮೈಸೂರು

ಶ್ರೀ ಹೊಸಮಠಾಧ್ಯಕ್ಷರಾದ

ಚರಮೂರ್ತಿ

ಶ್ರೀ ಬಸವಲಿಂಗಸ್ವಾಮಿಗಳಿಂದ

ಪರಿಶೋಧಿತವಾಗಿ,

ಪ್ರಕಟಿಸಲ್ಪಟ್ಟಿತು.





ಮೊದಲನೆಯ ಆವೃತ್ತಿ ೧೦೦೦ ಪ್ರತಿಗಳು.

ಮೈಸೂರು

ಶ್ರೀಮತ್ಕನ್ಯಕಾಪರಮೇಶ್ವರೀಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.



ಶಾಲೀವಾಹನಶಕ ೧೮೫೦. ಪ್ರಭವನಾಮಸಂವತ್ಸರ.



ಬೆಲೆ ೮ ಆಣೆ.

|| ಶ್ರೀಃ ||

ಶ್ರೀ ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂದ

ರಚಿತವಾದ,

# ಷಟ್ಸ್ಥಲಕೌಮುದಿಯು

ಮೈಸೂರು

ಶ್ರೀ ಹೊಸಮಠಾಧ್ಯಕ್ಷರಾದ

ಚರಮೂರ್ತಿ

ಶ್ರೀ ಬಸವಲಿಂಗಸ್ವಾಮಿಗಳಿಂದ

ಪರಿಶೋಧಿತವಾಗಿ,

ಮೈಸೂರು ದೊಡ್ಡಪೇಟೆಯಲ್ಲಿರತಕ್ಕ

ಶ್ರೀಮತ್ಕನ್ಯಕಾಪರಮೇಶ್ವರೀಪ್ರೆಸ್ಸಿನಲ್ಲಿ ಮುದ್ರಾಪಿತವಾಗಿ

ಪ್ರಕಟಿಸಲ್ಪಟ್ಟಿತು.

ಮೊದಲನೆಯ ಆವೃತ್ತಿ ೧೦೦೦ ಪ್ರತಿಗಳು.

ಶಾಲೀವಾಹನಶಕ ೧೮೫೦ ನೆಯ ಪ್ರಭವನಾಮಸಂವತ್ಸರದ

ಭಾದ್ರಪದಮಾಸ ಕ್ರೈ. ಶ. 1927. ಸೆಪ್ಟಂಬರ್.

ಶ್ರೀ ರೇಣುಕಾದ್ಯಾಚಾರ್ಯೇಃ ಪ್ರಸೀದನ್ತು.

# ಪ್ರ ಸ್ತಾ ವ ನೆ .

---

ಶ್ರೀ|| ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂದ ರಚಿತವಾದ "ಷಟ್ಸ್ಥಲ ಕೌಮುದೀ" ಎಂಬೀ ಗ್ರನ್ಥವು— ವೇದಾಗಮ ಪುರಾಣಾದಿ ಪ್ರಮಾಣವಚನ ಸಮನ್ವಿತವಾಗಿ, ಯುಕ್ತಿಯುಕ್ತವಾಗಿ, ಕರ್ನಾಟಕ ವಾಣೀಮಯವಾಗಿ ವೀರಶೈವಸಿದ್ಧಾನ್ತವನ್ನು ಸ್ಪಷ್ಟವಾಗಿ ಬೋಧಿಸುತ್ತದೆ.

ಇದರಲ್ಲಿ ಎರಡು ಪ್ರಕರಣಗಳಿರುತ್ತವೆ. ಷಟ್ಸ್ಥಲಪ್ರಕರಣವೆಂಬ ಮೊದಲನೆಯ ಪ್ರಕರಣದಲ್ಲಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬಾರು ಸ್ಥಲಗಳ ವಿಚಾರಗಳು, ಅಷ್ಟಾವರಣ ಪ್ರಕರಣವೆಂಬ ಎರಡನೆಯ ಪ್ರಕರಣದಲ್ಲಿ ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷ, ಮಂತ್ರ, ಪಾದೋದಕ, ಪ್ರಸಾದ ನಿರೂಪಣ ಪೂರ್ವಕವಾಗಿ ಸತ್ಕ್ರಿಯಾಚಾರಗಳು ನಿರೂಪಿಸಲ್ಪಟ್ಟಿರುತ್ತವೆ. ಪಾದೋದಕ ನಿರೂಪಣ ಸಂದರ್ಭದಲ್ಲಿ ಕೆಲವರ ನಡವಳಿಕೆಗಳು ಖಂಡಿಸಲ್ಪಟ್ಟಿರುತ್ತವೆ.

ಶಾಲೀವಾಹನಶಕ ೧೬೬೬ ರಲ್ಲಿ ಅಂದರೆ ಈಗ್ಗೆ ೧೮೪ ವರ್ಷ ಸಮಯದಲ್ಲಿ ಹುಟ್ಟಿದ "ವೀರಶೈವಾನನ್ದಚನ್ದ್ರಿಕಾ" ಎಂಬ ಗ್ರಂಥದಲ್ಲಿಯಾದರೋ ಪಾದೋದಕ ಪ್ರಸಾದ ನಿಷೇವಣ ವಿಚಾರವು ವಿಸ್ತಾರವಾಗಿ ಕಥಿತವಾಗಿದೆ. ಆದರೂ ಅಲ್ಲಿ ಈ ಷಟ್ಸ್ಥಲಕೌಮುದೀ ಗ್ರನ್ಥಕಾರನಿಂದ ಖಣ್ಡಿಸಲ್ಪಟ್ಟಿರತಕ್ಕ ನಡವಳಿಕೆಗಳ ಪ್ರಸ್ತಾಪವು ಮಾಡಲ್ಪಟ್ಟಿಲ್ಲವು. ಆದ್ದರಿಂದ ಆ ನಡವಳಿಕೆಗಳು ವೀರಶೈವಾನನ್ದಚನ್ದ್ರಿಕಾಕಾರನ ಕಾಲದಲ್ಲಿ ಇರಲಿಲ್ಲವೆಂದೂ, ಈ ಷಟ್ಸ್ಥಲಕೌಮುದೀಕಾರನ ಕಾಲದಲ್ಲಿ ಇದ್ದಿತೆಂದೂ ನಿಸ್ಸಂಶಯವಾಗಿ ಹೇಳಬಹುದು.

ಈ ಷಟ್ಸ್ಥಲಕೌಮುದೀಕಾರನು— ವೀರಶೈವಾನನ್ದ ಚನ್ದ್ರಿಕಾಕಾರನ ಕಾಲಾನನ್ತರದಲ್ಲಿ ಅಂದರೆ ಈಗ್ಗೆ ಹಿಂದೆ ೯೦ ಅಥವಾ ೧೦೦ ವರ್ಷ ಸಮಯದಲ್ಲಿ ಇದ್ದನು ಎಂಬಂಶವನ್ನು ಊಹಿಸಬಹುದು. ಈ ಊಹೆಗೆ ಈ ಗ್ರನ್ಥದಲ್ಲಿರುವ ಕನ್ನಡ ಮಾತಿನ ಸ್ವರೂಪವೂ ಸಾಧಕವಾಗಿದೆ.

ಈತನಿಂದ ಈ ಗ್ರನ್ಥದಲ್ಲಿ ಪ್ರತಿಪಾದಿತವಾಗಿರತಕ್ಕ ವಿಷಯಗಳನ್ನೂ ತನಗೆ ಹೇಳಲ್ಪಟ್ಟಿರತಕ್ಕ ವಿಶೇಷಣಗಳ ಅರ್ಥವನ್ನೂ ಪರ್ಯಾಲೋಚಿಸಿದರೆ, ಈತನು—ವಿರ

ಕ್ತನೆಂದೂ, ಸುಪ್ರಸಿದ್ಧ ಮಹಾತ್ಮನಾಗಿದ್ದ ಶ್ರೀ ತೋಂಟದ ಸಿದ್ಧಲಿಂಗಸ್ವಾಮಿಯ ಪರಂಪರಾಗತನೇದೂ, ವೇದಾಗಮೇತಿಹಾಸ ಸ್ಮೃತಿ ಪುರಾಣ ವ್ಯಾಕರಣ ಮೊದಲಾದ ವಿದ್ಯೆಗಳಲ್ಲಿ ಅತಿಶಯವಾದ ವೈದುಷ್ಯವನ್ನು ಸಂಪಾದಿಸಿದವನೆಂದೂ, ಅನವದ್ಯ ಶಿವಾದ್ವೈತ ವಿದ್ಯಾನಿಧಿಯೆಂದೂ, ವೀರಶೈವಸಿದ್ಧಾಂತೋಕ್ತಾಚಾರಾನುಷ್ಠಾನತತ್ಪರನಾಗಿ ಆ ಆಚಾರಗಳನ್ನು ಸ್ಥಾಪಿಸಿದವನೆಂದೂ ವ್ಯಕ್ತವಾಗುತ್ತದೆ.

ಈತನಿಂದ ತನ್ನೀಗ್ರನ್ಥದಲ್ಲಿ "ಷಟ್ಸ್ಥಲದೀಪಿಕೆ"—"ಸರ್ವಾಗಮಸಾರ" ಎಂಬ ಗ್ರನ್ಥಗಳೂ ತನ್ನಿಂದ ರಚಿತಗಳಾಗಿರುತ್ತವೆ ಎಂಬಂಶವು ಸೂಚಿಸಲ್ಪಟ್ಟಿದೆಯಾದ್ದರಿಂದ ಈತನನ್ನು—ಅನೇಕ ಗ್ರನ್ಥಗಳಂ ರಚಿಸಿ ಲೋಕಕ್ಕೆ ಪರಮೋಪಕಾರವಂ ಮಾಡಿದ ಮಹಾನುಭಾವನನ್ನಾಗಿ ಹೇಳತಕ್ಕದು ಅಸಮಂಜಸವಾಗುವುದಿಲ್ಲವು. ಈತನಿಂದ ಇನ್ನೂ ಎಷ್ಟುಗ್ರಂಥಗಳು ರಚಿತಗಳಾಗಿ ಇರುತ್ತವೆಯೋ ಗೊತ್ತಾಗಿಲ್ಲವು.

ಷಟ್ಸ್ಥಲದೀಪಿಕೆ—ಸರ್ವಾಗಮಸಾರ ಎಂಬ ಎರಡು ಗ್ರನ್ಥಗಳು ನಮಗೆ ದೊರಕಿಲ್ಲವಾದ್ದರಿಂದ, ಯಾವ ಮಹನೀಯರಾದರೂ ಆ ಗ್ರನ್ಥಗಳನ್ನು ನಮಗೆ ಕಳುಹಿಸಿದರೆ, ಅವರಿಗೆ ನಮ್ಮ ಕೃತಜ್ಞತೆಯನ್ನು ತಿಳಿಸುವೆವಲ್ಲದೆ, ಆ ಗ್ರನ್ಥಗಳನ್ನೂ ಮುದ್ರಣ ಮಾಡಿಸುವೆವು.

"ಈ ಷಟ್ಸ್ಥಲಕೌಮುದಿಯು" ವೀರಶೈವಸಿದ್ಧಾನ್ತವನ್ನು ಚೆನ್ನಾಗಿ ಬೋಧಿಸತಕ್ಕದಾದ್ದರಿಂದ ಇದರಿಂದ ನಮ್ಮ ವೀರಶೈವೀಯರಿಗೆ ವಿಶೇಷ ಪ್ರಯೋಜನವುಂಟಾಗುವುದೆಂದು ಭಾವಿಸಿ ಇದನ್ನು ಪರಿಶೋಧಿಸಿ ಮುದ್ರಣಮಾಡಿಸಿರುತ್ತೇವೆ.

ನಮ್ಮ ಶ್ರೀಮಠದ ಪ್ರಾಚೀನ ತಾಳಪತ್ರ ಪುಸ್ತಕ ಸಮುದಾಯದಲ್ಲಿ ದೊರಕಿದ ಈ ಗ್ರನ್ಥದ ತಾಳಪತ್ರ ಸಮಗ್ರಪ್ರತಿಯ ಸಹಾಯಕ್ಕೆ ಚಿಕ್ಕನ ಹಳ್ಳಿಯ ವೇ|| ಸಿದ್ಧಲಿಂಗಶಾಸ್ತ್ರಿಗಳ ಕುಮಾರರಿಂದ ಈ ಗ್ರನ್ಥದ ಸಮಗ್ರವಾದ ಕಾಗದ ಪ್ರತಿಯೊಂದು ದೊರಕಿತು. ಆ ಪ್ರತಿಯು ಸುಮಾರು ೫೦–೬೦ ವರ್ಷಕ್ಕೆ ಹಿಂದೆ ಬರೆಯಲ್ಪಟ್ಟುದಾಗಿ ಸ್ಫುಟಾಕ್ಷರಗಳುಳ್ಳುದಾಗಿದೆ. ಇಲ್ಲಿನ ಆಸ್ಥಾನ ವಿದ್ವಾಂಸರಾಗಿದ್ದ ವೇ|| ಯಸ್. ಆರ್. ಕರಿಬಸವಶಾಸ್ತ್ರಿಗಳ ಕುಮಾರರಾದ ರುದ್ರಪ್ಪನವರಲ್ಲಿ ಇರತಕ್ಕ ಈ ಗ್ರನ್ಥದ ಕಾಗದದ ಪುಸ್ತಕ ಪ್ರತಿಯೊಂದನ್ನು ನೋಡಿದೆವು, ಅದರಲ್ಲಿ ಪ್ರಸಾದಸ್ಥಲನಿರೂಪಣಭಾಗವು ಮಾತ್ರ ಇರಲಿಲ್ಲ, ಮಿಕ್ಕ ಭಾಗವೆಲ್ಲವೂ ಇರುತ್ತದೆ. ಆ ಉಭಯಶಾಸ್ತ್ರಿಕುಮಾರರಿಂದ ದೊರಕಿದ ಪ್ರತಿಗಳು ಇದರ ಪರಿಶೋಧನಕಾರ್ಯದಲ್ಲಿ

ನಮಗೆ ಸಹಾಯಕರಗಳಾದವಾದ್ದರಿಂದ ಅವರಿಗೆ ನಮ್ಮ ಕೃತಜ್ಞತೆಯನ್ನು ತಿಳಿಯಿಸುತ್ತೇವೆ.

ವೀರಶೈವ ಧರ್ಮಪ್ರಚಾರಣೋದ್ಯೋಗದಲ್ಲಿ ಔತ್ಸುಕ್ಯಶಾಲಿನಿಯಾಗಿರುವ ಮುಡುಕುತೊರೆಯ "ಶ್ರೀ|| ವೀರಶೈವಮಠಸಂವರ್ಧಿನೀ" ಎಂಬ ವೀರಶೈವ ಬ್ರಾಹ್ಮಣ ಮಹಾಸಭೆಯಿಂದ ನಮಗೆ ಈ ಗ್ರಂಥ ಮುದ್ರಣಕಾರ್ಯಾರ್ಥವಾಗಿ ಸಂಭಾವನಾರೂಪವಾಗಿ (೨೫) ಇಪ್ಪತ್ತೈದು ರೂಪಾಯಿಗಳು ಕಳುಹಲ್ಪಟ್ಟವಾದ್ದರಿಂದ ಆ ಸಭೆಯವರಿಗೆ ನಮ್ಮ ಕೃತಜ್ಞತೆಯನ್ನು ನಿವೇದಿಸುತ್ತೇವೆ.

ತಾ|| ೮-೯-೧೯೨೭.
ಮೈಸೂರು.

ಚರಮೂರ್ತಿ,
ಶ್ರೀ|| ಬಸವಲಿಂಗಸ್ವಾಮಿಗಳು,
ಶ್ರೀ ಹೊಸಮಠ.



# ಷಟ್ಸ್ಥಲಕೌಮುದಿಯಲ್ಲಿ ಅಶುದ್ಧ ಶುದ್ಧ ಪತ್ರಿಕಾ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೨ | ೪ | ಮೇವಾದ್ವಿತೀ | ಮೇವಾಽದ್ವಿತೀ |
| , | ೬ | ಅಸ್ತು | ಅಸ್ತು |
| , | ೯ | ನಿಹಿತೋಸ್ಯ | ನಿಹಿತೋಽಸ್ಯ |
| , | ೨೫ | ಬ್ರಹ್ಮಣೋಧಿ | ಬ್ರಹ್ಮಣೋಽಧಿ |
| ೩ | ೧೭ | ಶ್ರೂಯತೇ | ಶ್ರೂಯತೇ |
| , | ೨೮ | ಸೋನ್ತರಾ | ಸೋಽನ್ತರಾ |
| , | ೨೯ | ಪ್ರಾವಿಶತ್ಸೋಹಂ | ಪ್ರಾವಿಶತ್ಸೋಽಹಂ |
| , | ,, | ನಿತ್ಯಾನಿತ್ಯೋಹಮ್ | ನಿತ್ಯಾನಿತ್ಯೋಽಹಮ್ |
| ೪ | ೬ | ವಿಶ್ವರೂಪೋಸಿ | ವಿಶ್ವರೂಪೋಽಸಿ |
| , | ೮ | ಸೋನನ್ತೋ | ಸೋಽನನ್ತೋ |
| , | , | ಯೋನನ್ತ | ಯೋಽನನ್ತ |
| , | ೨೦ | ರೋಸೌ | ರೋಽಸೌ |
| , | ೨೧ | ಜೋಹಂ | ಜೋಽಹಂ |
| ೫ | ೬ | ಕಾಲೋಗ್ನಿಸ್ಸ | ಕಾಲೋಽಗ್ನಿಸ್ಸ |
| ೬ | ೧೨ | ಅವಾಜ್ಮಾನಸ | ಅವಾಙ್ಮಾನಸ |
| ೭ | ೧೪ | ಷಟ್ಸ್ಥಲ | ಷಟ್ಸ್ಥಲ |
| ೮ | ೯ | ತತ್ತ್ವ | ತತ್ವ |
| ೧೨ | ೫ | ಮುಕ್ತೋಧೂನ್ಮುಕ್ತ | ಮುಕ್ತೋಽಭೂನ್ಮುಕ್ತ |
| ೧೪ | ೨೯ | ಪ್ರಕಾರೋಯಂ | ಪ್ರಕಾರೋಽಯಂ |
| ೧೫ | ೩೦ | ದೇವೋಸ್ತಿ | ದೇವೋಽಸ್ತಿ |
| ೧೭ | ೨೪ | ತಕ್ಕದು | ತಕ್ಕುದು |
| ೧೮ | ೧೯ | ವೂಜಿಸ | ಪೂಜಿಸ |
| ೨೨ | ೧೫ | ಣೋಧಿಪತಿ | ಣೋಽಧಿಪತಿ |
| ೨೪ | ೨೪ | ಮಾಹೇಶ್ವರೋಸೌ | ಮಾಹೇಶ್ವರೋಽಸೌ |
| ೨೫ | ೬ | ಪ್ರಸನ್ನಾತ್ಮಾಽ | ಪ್ರಸನ್ನಾತ್ಮಾಽಽ |
| ,, | ೩೦ | ತತ್ತ್ವ | ತತ್ವ |
| ೨೬ | ೨೭ | ಚಿತ್ತಶ್ಯು | ಚಿತ್ತಶು |
| ೨೮ | ೧೪ | ತೇಸೌ | ತೇಽಸೌ |
| ,, | ೨೨ | ಯೋಗೋಸ್ಯ | ಯೋಗೋಽಸ್ಯ |

| | | | |
|---|---|---|---|
| ೨೯ | ೧೧ | ನಿರೋಧಿಸುವ | ನಿರೋಧಿಸಿದ |
| ೩೦ | ೧೮ | ಪ್ರಾಣಲಿಜ್ಗೇ | ಪ್ರಾಣಲಿಜ್ಗೇ |
| ,, | ೧೯ | ಠೌ | ರೌ |
| ೩೨ | ೧೪ | ಕೀರ್ತ್ತಿತೋಸೌ | ಕೀರ್ತ್ತಿತೋಽಸೌ |
| ೩೩ | ೮ | ಸ್ತೋೀಯಂ | ಸ್ತೋೀಽಯಂ |
| ,, | ೧೩ | ವಾಸ್ಯ | ವಾಽನ್ಯ |
| ,, | ೧೭ | ಕೋವಾನ್ಯ | ಕೋಽವಾನ್ಯ |
| ೩೪ | ೧೯ | ಸೇವಾಸ್ಯಸ್ಯ | ಸೇವಾಽನ್ಯಸ್ಯ |
| ,, | ೨೦ | ತಥಾಸ್ಯೇಷಾಂ | ತಥಾಽನ್ಯೇಷಾಂ |
| ೩೫ | ೧೫ | ನಿಷ್ಕಾಹಿತ | ನಿಷ್ಕಾಽಹಿತ |
| ,, | ೨೯ | ಚೈತ್ರೋಹಂ | ಚೈತ್ರೋಽಹಂ |
| ೩೬ | ೧೧ | ನಾವಿಕಲ್ಪೋಪಿ | ನಾವಿಕಲ್ಪೋಽಪಿ |
| ,, | ೧೩ | ದದ್ದ್ವಯಂ | ದದ್ವಯಂ |
| ,, | ೨೨ | ಶಿವೋಹಮ್ | ಶಿವೋಽಹಮ್ |
| ,, | ೨೫ | ಶಿವೋಹಮಿತಿ | ಶಿವೋಽಹಮಿತಿ |
| ೩೭ | ೧೩ | ಯಾವದೂ | ಯಾವುದೂ |
| ೪೧ | ೧೪ | ಜಗತ್ರಯೇಽನ್ಯೋಸ್ತಿ | ಜಗತ್ರಯೇಽನ್ಯೋಽಸ್ತಿ |
| ೪೨ | ೨೩ | ಪಶುಭ್ಯೋಪಿ | ಪಶುಭ್ಯೋಽಪಿ |
| ೪೩ | ೨೧ | ದೇವೋಪಿ | ದೇವೋಽಪಿ |
| ೪೪ | ೩ | ಷಣ್ಮುಖನ! | ಷಣ್ಮುಖನೇ ! |
| ೪೭ | ೨೭ | ನಮೋಸ್ತು | ನಮೋಽಸ್ತು |
| ೪೮ | ೧೬ | ವನ್ದೇಹಂ | ವನ್ದೇಽಹಂ |
| ೪೯ | ೧೨ | ಸ್ಕನ್ದೋಮ್ಬಿಕಾ | ಸ್ಕನ್ದೋಽಮ್ಬಿಕಾ |
| ,, | ೨೨ | ನಾನ್ಯೋಸ್ತ್ಯತಃ | ನಾನ್ಯೋಽಸ್ತ್ಯತಃ |
| ,, | ೨೭ | ಏನಿರ್ಣಯಮ್ | ಏನಿರ್ಣಯಮ್ ॥ |
| ,, | ೨೮ | ಭಕ್ತಿಮದ್ಭ್ಯೋತಿ | ಭಕ್ತಿಮದ್ಭ್ಯೋಽತಿ |
| ೫೪ | ೨೨ | ತತ್ತ್ವವನ್ನು | ತತ್ವವನ್ನು |
| ೫೫ | ೧೧ | ಶಿವತತ್ತ್ವ | ಶಿವತತ್ವ |
| ೬೧ | ೨೨ | ಅತೋಸ್ಮಿನ್ಲೋಕೇ | ಅತೋಽಸ್ಮಿನ್ಲೋಕೇ |
| ೬೨ | ೯ | ಭ್ರಾತಾ | ಭ್ರಾತಾ |

| | | | |
|---|---|---|---|
| ,, | ೧೨ | ಸ್ಮೃತಾಃ'' ತಂದೆಯು | ಸ್ಮೃತಾಃ'' ಎಂಬಲ್ಲಿ [ತಂದೆಯು |
| ೬೮ | ೧೮ | ತತ್ತ್ವ | ತತ್ವ |
| ೭೦ | ೧೫ | ವಿಜ್ಞೇಯಂ ಅನುಕಲ್ಪ ಮಥೋಚ್ಯತೇ'' | ವಿಜ್ಞೇಯಮ್'' |
| ,, | ೨೬ | ಯುಜೇಪಿ | ಯುಜೇಽಪಿ |
| ೭೫ | ೧೭ | ಪೂಜಿಕೋಪಿ | ಪೂಜಿತೋಽಪಿ |
| ೭೬ | ೨೧ | ತಿವಾಷ್ಟಾಕ್ಷರ | ಶಿವಾಷ್ಟಾಕ್ಷರ |
| ,, | ೨೬ | ವಾಪಿ | ವಾಽಪಿ |
| ,, | ೩೦ | ಮನಸಾಪಿ | ಮನಸಾಽಪಿ |
| ೭೭ | ೭ | ಉದ್ಧೂಳನೇಪ್ಯ | ಉದ್ಧೂಳನೇಽಪ್ಯ |
| ೮೨ | ೧೬ | ರುದಾಕ್ಷ | ರುದ್ರಾಕ್ಷ |
| ೮೩ | ೧೪ | ರುದಾಕ್ಷಗಳ್ | ರುದ್ರಾಕ್ಷಗಳ್ |
| ೮೫ | ೫ | ಸಬ್ಬನ್ಧ | ಸಮ್ಬನ್ಧ |
| ,, | ೨೨ | ವಾನ್ತ್ಯಜೋವಾಪಿ | ವಾಽನ್ತ್ಯಜೋವಾಽಪಿ |
| ೮೯ | ೧೬ | ಸುವ್ರತೇ ‖ | ಸುವ್ರತೇ । ‖ |
| ೯೦ | ೫ | ಚಿದಾತ್ಮನಾಥ | ಚಿದಾತ್ಮನಾಽಹ |
| ,, | ೬ | ಪಞ್ಚಾಕ್ಷ | ಪಞ್ಚಾಶ |
| ೯೩ | ೧೫ | ದರ್ಪಣಾಕಾರಃ ಪಞ್ಚವರ್ಣರಾಟ್ | ದರ್ಪಣಾಕಾರಃ ಓಙ್ಕಾರಃ ಪಞ್ಚವರ್ಣರಾಟ್ |
| ೯೪ | ೧೬ | ಸೋಹಮ್, | ಸೋಽಹಮ್, |
| ,, | ೧೯ | ಆ 'ಸೋಹಮ್' | ಆ 'ಸೋಽಹಮ್' |
| ೯೬ | ೨೦ | ಪ್ರಾಙ್ಮುಖೋದಙ್ಮುಖೋಪಿ | ಪ್ರಾಙ್ಮುಖೋದಙ್ಮುಖೋಽಪಿ |
| ೧೦೦ | ೧೫ | ಪಞ್ಚಾಕ್ಷರೀಸಮುಚ್ಚಾರ್ಯ | ಪಞ್ಚಾಕ್ಷರೀಂಸಮುಚ್ಚಾರ್ಯ |
| ೧೦೫ | ೧೨ | ಮಾತಾನುವರ್ತಿಗಳೂ | ಮತಾನುವರ್ತಿಗಳೂ |
| ೧೦೭ | ೩ | ನ ವೆಂದೂ | ವೆಂದೂ |
| ೧೧೦ | ೨೪ | ಜಙ್ಗಮಪಾದಪೂಜೆಯಂ | ಜಙ್ಗಮರ ಪಾದಪೂಜೆಯಂ |
| ೧೧೩ | ೨೮ | ಹಸ್ತಸ್ಥಲದಿಂ | ಹಸ್ತತಲದಿಂ |
| ೧೧೯ | ೨೮ | ಭೂಷಣತಾಪಿಚ ‖ | ಭೂಷಣಶ್ಚಾಽಪಿಚ ‖ |

—:0:—

॥ ಓಮ್ ॥

ಶ್ರೀಪರಬ್ರಹ್ಮಣೇಶಿವಾಯನಮಃ.

---

# ಷಟ್ಸ್ಥಲ ಕೌಮುದಿಯು.



ಋತಂ ಸತ್ಯಂ ಪರಬ್ರಹ್ಮ ಪುರುಷಂ ಸಾಮ್ಬಮೀಶ್ವರಮ್ ॥
ಊರ್ಧ್ವರೇತಂ ವಿರೂಪಾಕ್ಷಂ ಹೃದಿ ಧ್ಯಾಯೇ ಮಹೇಶ್ವರಮ್ ॥೧॥
ಯಸ್ಸಂಸಾರಾನ್ಮಹಾ ಘೋರಾನ್ಮೋಚಯತ್ಯಾಶ್ರಿತಾನ್ಜನಾನ್ ॥
ಕೃಪಾಕಟಾಕ್ಷಪಾತೇನ ತಸ್ಮೈ ಶ್ರೀಗುರವೇ ನಮಃ ॥೨॥
ಶಿವಭಕ್ತ್ಯಮೃತಾಸ್ವಾದಚೇತಸೇ ಶಿವಜನ್ಮನೇ ॥
ನಮಶ್ಶ್ರೀನನ್ದಿನಾಥಾಯ ಶಙ್ಕರಾಪರಮೂರ್ತಯೇ ॥೩॥
ಸರ್ವಂ ಶಕ್ತ್ಯಂಶಮುತ್ಸೃಜ್ಯ ಶಿವಮೇಕಮಶಿಶ್ರಿಯತ್ ॥
ಯಸ್ತಸ್ಮೈ ಭೃಙ್ಗನಾಥಾಯ ನಮಃ ಕಲ್ಯಾಣರೂಪಿಣೇ ॥೪॥
ದಕ್ಷಯಜ್ಞಶಿರೋಹರ್ತ್ರೇ ಸುರದರ್ಪಾಪಹಾರಿಣೇ ॥
ವೀರಭದ್ರಾಯ ರೌದ್ರಾಯ ನಮೋವಿಕ್ರಮಶಾಲಿನೇ ॥೫॥
ಜಗತ್ಸಂಹರಣೋದ್ಯುಕ್ತ ನೃಸಿಂಹಾಜಿನಹಾರಿಣೇ ॥
ನಮಶ್ಶ್ರೀಶರಭೇಶಾಯ ಪದಾಷ್ಟಕವಿಭಾಸಿನೇ ॥೬॥
ಮಹಾತ್ಮನೋ ಜಗದ್ವನ್ದ್ಯಾನಸಙ್ಖ್ಯಾಕಾನ್ಮಹಾಗಣಾನ್ ॥
ನಮಾಮಿ ಶಿವಸದ್ಭಕ್ತಿಸಾಗರೇ ಮಗ್ನಮಾನಸಾನ್ ॥೭॥
ಶಿವತತ್ವಾಮೃತಾಸ್ವಾದಚೇತಸೇ ಯೋಗಿನೇನಮಃ ॥
ಶ್ರೀಚೆನ್ನಬಸವೇಶಾಯ ಷಟ್ಸ್ಥಲಬ್ರಹ್ಮವಾದಿನೇ ॥೮॥
ಸರ್ವೇಷಾಂಬಸವಾದೀನಾಂ ಭಕ್ತಾನಾಂ ಜ್ಞಾನದಾಯಿನೇ ॥
ಯೋಗೀನ್ದ್ರಾಯ ನಮಸ್ತಸ್ಮೈ ಪ್ರಭವೇ ಶಿವಮೂರ್ತಯೇ ॥೯॥
ನಮಶ್ಶ್ರೀಬಸವೇಶಾಯ ವೃಷೇನ್ದ್ರಪರಮೂರ್ತಯೇ ॥
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ॥೧೦॥

## ಪೀಠಿಕಾ.

"ಸದೇವ ಸೋಮ್ಯೇದಮಗ್ರ ಆಸೀದೇಕಮೇವಾಽದ್ವಿತೀಯಮ್''—"ಸರ್ವಂ ಖಲ್ವಿದಂ ಬ್ರಹ್ಮ'' ಇತ್ಯಾದಿ.

"ಸರ್ವೋ ವೈ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು | ಪುರುಷೋ ವೈ ರುದ್ರಸ್ಸನ್ಮಹೋ ನಮೋನಮಃ | ವಿಶ್ವಂಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಞ್ಚಯತ್ | ಸರ್ವೋಹ್ಯೇಷರುದ್ರಸ್ತಸ್ಮೈ ರುದ್ರಾಯ ನಮೋಅಸ್ತು'' "ಅಣೋರಣೀಯಾನ್ಮಹತೋ ಮಹೀಯಾನಾತ್ಮಾ ಗುಹಾಯಾಂನಿಹಿತೋಽಸ್ಯ ಜನ್ತೋಃ| ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಮ್''— "ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯನ್ತೀಂ ಸರೂಪಾಮ್ | ಅಜೋಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ''— "ಯೋದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ | ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸನೋದೇವಶ್ಶುಭಯಾ ಸ್ಮೃತ್ಯಾಸಂಯುನಕ್ತು''—"ದಹ್ರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಣ್ಡರೀಕಂ ಪುರಮಧ್ಯಸಂಸ್ಥಮ್ | ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದನ್ತಸ್ತದುಪಾಸಿತವ್ಯಮ್''—"ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾನ್ತೇ ಚ ಪ್ರತಿಷ್ಠಿತಃ| ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ''—"ಋತಗ್ಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಙ್ಗಳಮ್ | ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋನಮಃ'' ಇತ್ಯಾದಿ.

"ಯತೋ ವಾ ಇಮಾನಿ ಭೂತಾನಿ ಜಾಯನ್ತೇ ಯೇನಜಾತಾನಿ ಜೀವನ್ತಿ ಯತ್ಪ್ರಯನ್ತ್ಯಭಿಸಂವಿಶನ್ತಿ ತದ್ಬ್ರಹ್ಮೇತಿ ವಿಜಿಜ್ಞಾಸಸ್ವ''—"ಅತಃಪರಂ ನಾನ್ಯದಣೀಯಸಗ್ಂಹಿ ಪರಾತ್ಪರಂ ಯನ್ಮಹತೋ ಮಹಾನ್ತಮ್ | ಯದೇಕಮವ್ಯಕ್ತಮನನ್ತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್''—"ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್'' ಇತ್ಯಾದಿ.

ಪ್ರತ್ಯಞ್ಚನಸ್ತಿಷ್ಠತಿ ಸ ಯುಗಸ್ಯಾನ್ತಕಾಲೇ ಏಕಏವ ರುದ್ರೋ ನ ದ್ವಿತೀಯಾಯ ತಸ್ಥೇ | ಸ ಬ್ರಹ್ಮಾ ನ ವಿಷ್ಣುರ್ನಸೂರ್ಯೋ ನಾಗ್ನಿರ್ನ ಚನ್ದ್ರತಾರಕಾಃ'' "ಯದಾ ತಮಸ್ತನ್ನದಿವಾ ನರಾತ್ರಿ ರ್ನಸನ್ನಚಾಸಚ್ಛಿವಏವ ಕೇವಲಃ | ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ'' ಇತ್ಯಾದಿ.

" ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ " ಇತ್ಯಾರಭ್ಯ, " ವಿಶ್ವ ತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹು ರುತವಿಶ್ವತಸ್ಪಾತ್ | ಸಮ್ಬಾಹು ಭ್ಯಾಂಧಮತಿ ಸಮ್ಪತತ್ರೈರ್ದ್ಯಾವಾ ಪೃಥಿವೀ ಜನಯನ್ದೇವ ಏಕಃ" ಇತ್ಯನ್ತಮ್.

" ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹ ರ್ಷಿಃ " ಇತ್ಯಾದಿ.

" ತತಃಪರಂ ಬ್ರಹ್ಮ ಪರಂಬೃಹನ್ತಂ ಯಥಾನಿಕಾಯಂ ಸರ್ವಭೂತೇಷು ಗೂ ಢಮ್ | ವಿಶ್ವಸ್ಯೈಕಂ ಪರಿವೇಷ್ಟಿತಾರಮೀಶಂ ಜ್ಞಾತ್ವಾಽಮೃತಾಸ್ತೇ ಭವನ್ತಿ"— " ವೇದಾಹಮೇತಂ ಪುರುಷಂ ಮಹಾನ್ತಮಾದಿತ್ಯವರ್ಣಂ ತಮಸಃ ಪರಸ್ತಾತ್ | ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃಪನ್ಥಾ ವಿದ್ಯತೇಽಯನಾಯ" ಇತ್ಯಾದಿ.

" ಮಾಯಾನ್ತು ಪ್ರಕೃತಿಂ ವಿನ್ದ್ಯಾನ್ಮಾಯಿನನ್ತು ಮಹೇಶ್ವರಮ್| ಅಸ್ಯಾ ವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ " ಇತ್ಯಾದಿ.

" ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೈವತಾನಾಂ ಪರಮಂ ಚ ದೈವತಮ್ | ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶ ಮೀಡ್ಯಮ್ || ನ ತಸ್ಯ ಕಾರ್ಯಂಕರಣಂ ಚ ವಿದ್ಯತೇ ನ ತತ್ಸಮಶ್ಚಾಪ್ಯಧಿಕಶ್ಚ ದೃ ಶ್ಯತೇ | ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ || ನ ತಸ್ಯ ಕಶ್ಚಿತ್ಪತಿರಸ್ತಿ ಲೋಕೇ ನ ಚೇಶಿತಾ ನೈವಚ ತಸ್ಯಲಿಙ್ಗಮ್ | ನ ಕಾರಣಂ ಕಾರಣಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ" ಇತ್ಯಾದಿ.

" ದ್ಯಾವಾಭೂಮೀ ಜನಯನ್ದೇವ ಏಕಸ್ಸವಿಕ್ಷತ ಲೋಕಾನಸೃಜತ " ಇತ್ಯಾದಿ.

" ಜ್ಞಾತ್ವಾ ಶಿವಂ ಶಾನ್ತಿಮತ್ಯನ್ತಮೇತಿ " ಇತ್ಯಾದಿ.

" ವೇದಾಹಮೇತಂ ಪುರುಷಂ ಮಹಾನ್ತಮಾದಿತ್ಯವರ್ಣಂ ತಮಸಃ ಪರಸ್ತಾ ತ್ || ತಸ್ಯ ಯೋನಿಂ ಪರಿಪಶ್ಯನ್ತಿ ಧೀರಾಸ್ತನ್ಮೇ ಮನಶ್ಶಿವಸಙ್ಕಲ್ಪಮಸ್ತು" ಇತ್ಯಾದಿ.

" ದೇವಾ ಹ ವೈ ಸ್ವರ್ಗಂ ಲೋಕಮಗಮಂಸ್ತೇ ದೇವಾ ರುದ್ರಮಪೃಚ್ಛನ್ ಕೋ ಭವಾನಿತಿ ಸೋಽಬ್ರವೀದಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾ ಮಿ ಚ ನಾನ್ಯಃಕಶ್ಚಿನ್ಮತ್ತೋ ವ್ಯತಿರಿಕ್ತ ಇತಿ ಸೋನ್ತರಾದನ್ತರಂಪ್ರಾವಿಶದ್ದಿಶಶ್ಚಾ ನ್ತರಂ ಪ್ರಾವಿಶತ್ಸೋಽಹಂ ನಿತ್ಯಾನಿತ್ಯೋಽಹಮ್ " ಇತ್ಯಾರಭ್ಯ,

" ಧರ್ಮಂ ಧರ್ಮೇಣ ತರ್ಪಯಾಮಿ ಸ್ವೇನ ತೇಜಸಾ" ಇತ್ಯನ್ತಮ್. " ತತೋ ದೇವಾ ರುದ್ರಂ ನಾಪಶ್ಯಂಸ್ತೇ ದೇವಾ ರುದ್ರಂ ಧ್ಯಾಯನ್ತಿ ತತೋ ದೇವಾ ಊರ್ಧ್ವಬಾಹವಸ್ತುನ್ವನ್ತಿ ॥ ಯೋಹವೈರುದ್ರಸ್ಸ ಭಗವಾನ್" ಇತ್ಯಾರಭ್ಯ, " ಭೂರ್ಭುವಸ್ಸುವರನ್ತೇ ಶೀರ್ಷಂ ಜನದೋಮ್ | ವಿಶ್ವರೂಪೋಸಿ" ಇತ್ಯನ್ತಮ್.

" ಸ ಓಙ್ಕಾರೋ ಯ ಓಙ್ಕಾರಸ್ಸಪ್ರಣವೋ ಯಃ ಪ್ರಣವಸ್ಸಸರ್ವವ್ಯಾಪೀ ಯಸ್ಸರ್ವವ್ಯಾಪೀ ಸೋಽನನ್ತೋ ಯೋಽನನ್ತಸ್ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ಯದ್ವೈದ್ಯುತಂ ತತ್ಪರಂ ಬ್ರಹ್ಮೇತಿ | ಸಏಕಸ್ಸಏಕೋರುದ್ರಸ್ಸಈಶಾನಸ್ಸಭಗವಾಂತ್ಸ ಮಹೇಶ್ವರಸ್ಸ ಮಹಾದೇವಃ" ಇತ್ಯಾರಭ್ಯ, " ಅಥ ಕಸ್ಮಾದುಚ್ಯತೇ ಮಹಾದೇವೋ ಯಸ್ಸರ್ವಾನ್ಭಾವಾನ್ಪರಿತ್ಯಜ್ಯಾತ್ಮಜ್ಞಾನ ಯೋಗೈಶ್ವರ್ಯೇ ಮಹತಿ ಮಹೀಯತೇ ತಸ್ಮಾದುಚ್ಯತೇ ಮಹಾದೇವಃ | ತದೇತದ್ರುದ್ರಚರಿತಮ್" ಇತ್ಯನ್ತಮ್.

" ತಸ್ಮಾನ್ಮನೋಽಲೀನೇ ಮನಸಿಗತೇ ಸಙ್ಕಲ್ಪೇ ವಿಕಲ್ಪೇ ದಗ್ಧೇಪುಣ್ಯಾಪಾಪೇ ಸದಾಶಿವೋಮ್ ಶಕ್ತ್ಯಾತ್ಮಾ ಸರ್ವತ್ರಾವಸ್ಥಿತಃ ಪ್ರಕಾಶಯತೀತಿ ವೇದವಚನಂ ಭವತಿಭವತಿ" ಇತ್ಯಾದಿ.

" ಅಥ ಹೈನಂ ಪೈಪ್ಪಲಾದೋ ಬ್ರಹ್ಮಾಣಮುವಾಚ ಭೋಭಗವನ್ ಬ್ರಹ್ಮ ವಿಷ್ಣುರುದ್ರಾಣಾಂ ಮಧ್ಯೇ ಕೋವಾಧಿಕತರೋಧ್ಯೇಯಸ್ಸ್ಯಾತ್ತತ್ವಮೇವ ನೋ ಬ್ರೂಹೀತಿ | ತಸ್ಮೈ ಸಹೋವಾಚ ಪಿತಾಮಹಶ್ಚ | ಹೇ ಪೈಪ್ಪಲಾದ ಶೃಣು ವಾಕ್ಯಮೇತದ್ಬಹೂನಿ ಪುಣ್ಯಾನಿ ಕೃತಾನಿ ಯೇನ | ತೇನೈವ ಲಭ್ಯಃ ಪರಮೇಶ್ವರೋಽಸೌ ಯಸ್ಯಾಙ್ಗಜೋಽಹಂ ಹರಿರಿನ್ದ್ರಮುಖ್ಯಾಃ" ಇತ್ಯಾದಿ.

" ಓ ಮಿತ್ಯೇತದಕ್ಷರಮಾದೌ ಪ್ರಯುಕ್ತಂ ಧ್ಯಾನಂ ಧ್ಯಾಯಿತವ್ಯಮಿತ್ಯೇತದಕ್ಷರಂ ಪರಬ್ರಹ್ಮಾಸ್ಯ ಪಾದಾಶ್ಚತ್ವಾರೋ ವೇದಾಶ್ಚತುಷ್ಪಾದಿದಮಕ್ಷರಂ ಪರಂ ಬ್ರಹ್ಮ ಪೂರ್ವಾಸ್ಯಮಾತ್ರಾ ಪೃಥಿವ್ಯಕಾರಸ್ಸ ಋಗ್ಭಿರ್ಋಗ್ವೇದೋ ಬ್ರಹ್ಮಾ ವಸವೋ ಗಾಯತ್ರೀಗಾರ್ಹಪತ್ಯಃ | ದ್ವಿತೀಯಾನ್ತರಿಕ್ಷಂ ಸ ಉಕಾರಸ್ಸ ಯಜುರ್ಭಿರ್ಯಜುರ್ವೇದೋ ವಿಷ್ಣೂರುದ್ರಾಸ್ತ್ರಿಷ್ಟುಬ್ದಕ್ಷಿಣಾಗ್ನಿಃ | ತೃತೀಯಾದ್ಯೌಸ್ಸಮಕಾರಃ" ಇತ್ಯಾದಿ.

" ಅಥಾಶ್ವಲಾಯನೋಭಗವನ್ತಮ್" ಇತ್ಯಾರಭ್ಯ, " ಹೃತ್ಪುಣ್ಡರೀಕಂ ವಿರಜಂ ವಿಶುದ್ಧಂ ವಿಚಿನ್ತ್ಯ ಮಧ್ಯೇ ವಿಶದಂ ವಿಶೋಕಮ್ | ಅಚಿನ್ತ್ಯಮವ್ಯಕ್ತಮನನ್ತರೂಪಂ | ಶಿವಂ ಪ್ರಶಾನ್ತಮಮೃತಂ ಬ್ರಹ್ಮಯೋನಿಮ್ ತದಾದಿಮಧ್ಯಾನ್ತ

ವಿಹೀನಮೇಕಂ ವಿಭುಂ ಚಿದಾನನ್ದಮರೂಪಮದ್ಭುತಮ್ | ಉಮಾಸಹಾಯಂ ಪರಮೇಶ್ವರಂ ಪ್ರಭುಂತ್ರಿಲೋಚನಂ ನೀಲಕಣ್ಠಂ ಪ್ರಶಾನ್ತಮ್ | ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ | ಸಬ್ರಹ್ಮಾ ಸ ಶಿವಸ್ಸೇನ್ದ್ರಸ್ಸೋಕ್ಷರಃ ಪರಮಸ್ಸ್ವರಾಟ್ | ಸಏವ ವಿಷ್ಣುಸ್ಸ ಪ್ರಾಣಸ್ಸಕಾಲೋಗ್ನಿಸ್ಸಚನ್ದ್ರಮಾಃ | ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಮ್ | ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪನ್ಥಾ ವಿಮುಕ್ತಯೇ '' ಇತ್ಯಾದಿ.

'' ಧ್ಯಾಯಿತೀತೇಶಾನಂ ಪ್ರಧ್ಯಾಯಿತವ್ಯಂ ಸರ್ವಮಿದಂ ಬ್ರಹ್ಮವಿಷ್ಣುರುದ್ರೇನ್ದ್ರಾಸ್ತೇಸಮ್ಪ್ರಸೂಯನ್ತೇ ಸರ್ವಾಣಿ ಚೇನ್ದ್ರಿಯಾಣಿ ಸಹಭೂತೈ ರ್ನಕಾರಣಂ ಕಾರಣಾನಾಂ ಧ್ಯಾತಾಕಾರಣನ್ತು ಧ್ಯೇಯಸ್ಸರ್ವೈಶ್ವರ್ಯಸಮ್ಪನ್ನಸ್ಸರ್ವೇಶ್ವರಶ್ಶಮ್ಭುರಾಕಾಶಮಧ್ಯೇ '' ಇತ್ಯಾರಭ್ಯ, '' ಶಿವಏಕೋಧ್ಯೇಯಶ್ಶಿವಙ್ಕರಸ್ಸರ್ವಮನ್ಯತ್ಪರಿತ್ಯಜ್ಯ '' ಇತ್ಯನ್ತಮ್.

'' ಅಙ್ಗುಷ್ಠಮಾತ್ರಃ ಪುರುಷೋಮಧ್ಯ ಆತ್ಮನಿ ತಿಷ್ಠತಿ | ಈಶಾನೋಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ಏತದ್ವೈತತ್ || ಅಙ್ಗುಷ್ಠ ಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ | ಈಶಾನೋ ಭೂತಭವ್ಯಸ್ಯ '' ಇತ್ಯಾದಿ.

ಹೀಗೆಂಬ ಛಾನ್ದೋಗ್ಯ, ನಾರಾಯಣ, ತೈತ್ತಿರೀಯ, ಜಾಬಾಲ, ಶ್ವೇತಾಶ್ವತರ, ಶಿವಸಙ್ಕಲ್ಪಾಥರ್ವಶಿರಶ್ಶರಭಾಥರ್ವಶಿಖಾಕೈವಲ್ಯ, ಕಠವಲ್ಲೀ, ಬೃಹದಾರಣ್ಯ, ಬೃಹಜ್ಜಾಬಾಲ ಮುಣ್ಡಕತಾಪನೀಯ ಹಂಸಾದ್ಯುಪನಿಷತ್ತುಗಳಿಂದ,—

''ಸದ್ರೂಪನೂ, ಸಜಾತೀಯ ವಿಜಾತೀಯ ಸ್ವಗತಭೇದಶೂನ್ಯನೂ, ಸರ್ವಸ್ವರೂಪನೂ, ಸರ್ವಾತ್ಮನೂ, ಪರಮಮಹದ್ರೂಪನೂ, ಕಾರ್ಯಕಾರಣರೂಪನೂ, ಸರ್ವೋಪಾಸ್ಯನೂ, ಮಹೈಶ್ವರ್ಯಸಮ್ಪನ್ನನೂ, ಚಿದಾನನ್ದರೂಪನೂ, ಸ್ವಾತ್ಮಾರಾಮನೂ, ಸಕಲೋಪದ್ರವಕಳಙ್ಕರಹಿತನೂ, ಸಕಲ ಮಙ್ಗಳಾತ್ಮಕನೂ, ಪರಾಶಕ್ತ್ಯವಿನಾಭಾವ ಸಮ್ಬನ್ಧವುಳ್ಳವನೂ, ಕೃಷ್ಣಪಿಙ್ಗಳನೂ, ವಿರೂಪಾಕ್ಷನೂ, ತ್ರಿಲೋಚನನೂ, ವಿಶ್ವರೂಪನೂ, ಸೃಷ್ಟಿಸ್ಥಿತಿಸಂಹಾರಕಾರಣನೂ, ಪರಾತ್ಪರನೂ, ಸರ್ವೋತ್ಕೃಷ್ಟನೂ, ಸರ್ವಜ್ಞನೂ. ಮಾಯಾತೀತನೂ, ನಿರಙ್ಕುಶಪ್ರಕಾಶನೂ, ಸರ್ವಸಾಕ್ಷಿಯೂ, ವಿಶ್ವಲೋಚನನೂ, ವಿಶ್ವವದನನೂ, ವಿಶ್ವಬಾಹುವೂ, ವಿಶ್ವತಃಪಾದಗಳುಳ್ಳವನೂ, ಸರ್ವಪ್ರಕಾಶಕನೂ, ಸರ್ವಾನ್ತರ್ವರ್ತಿಯೂ, ಮೋಕ್ಷದಾಯಕನೂ, ವಿಶ್ವೇಶ್ವರನೂ, ವಿಶ್ವಾತೀತನೂ, ಪರಮದೇವತಾಸ್ವರೂಪನೂ, ಸರ್ವದೇವಸಂಸ್ತುತ್ಯನೂ, ಕಾರ್ಯಕಾರಣರಹಿತನೂ, ಕಾರಣಾಧೀಶನೂ, ಜನನ ಮರಣವಿರಹಿತನೂ, ಚಿದಚಿತ್ಪ್ರಪಂಚಾಧೀಶನೂ,

ಮಾಯೋಪಾಧಿಕನೂ, ಶುಭಸ್ಮೃತಿಕಾರಣನೂ, ಸಮಸ್ತ ವೇದಪ್ರತಿಪಾದ್ಯನೂ, ಕಾಲತ್ರಯಾಬಾಧಿತನೂ, ಸರ್ವಶರೀರನೂ, ಸರ್ವಶಬ್ದವಾಚ್ಯನೂ, ಷಡ್ಗುಣೈಶ್ವರ್ಯಸಮ್ಪನ್ನನೂ, ಪ್ರಣವಪ್ರತಿಪಾದ್ಯನೂ, ಸಂಕಲ್ಪ ವಿಕಲ್ಪ ಪುಣ್ಯಪಾಪಲೇಪವಿಲ್ಲದವನೂ, ಪ್ರಣವಸ್ವರೂಪನೂ, ಸರ್ವಧ್ಯೇಯನೂ, ದಹರಪುಣ್ಡರೀಕಾನ್ತರ್ವರ್ತಿಯೂ, ವಿಶುದ್ಧನೂ, ಶೋಕರಹಿತನೂ, ಅಚಿನ್ತ್ಯನೂ, ಅವ್ಯಕ್ತನೂ, ಅನನ್ತರೂಪನೂ, ಪ್ರಶಾನ್ತನೂ, ಅಮೃತಸ್ವರೂಪನೂ, ಆದಿಮಧ್ಯಾನ್ತರಹಿತನೂ, ಮೃತ್ಯುಞ್ಜಯನೂ, ರೂಪರಹಿತನೂ, ಅತ್ಯದ್ಭುತನೂ, ಉಮಾಸಹಾಯನೂ, ನಿಗ್ರಹಾನುಗ್ರಹಸಮರ್ಥನೂ, ನೀಲಗ್ರೀವನೂ, ಯೋಗಿಗಳಿಂ ಪಡೆಯಲ್ತಕ್ಕವನೂ, ಶುಭಕರನೂ, ಸಕಲಜಗತ್ಕಾರಣನೂ, ಬ್ರಹ್ಮವಿಷ್ಣುರುದ್ರೇನ್ದ್ರಾದಿ ಸರ್ವದೇವಜನಕನೂ, ಅತೀನ್ದ್ರಿಯನೂ, ಅವಾಙ್ಮನಸಗೋಚರನೂ, ಅನ್ತಕಾನ್ತಕನೂ, ತ್ರಿಗುಣಾತೀತನೂ, ತ್ರಿಪುರಾನ್ತಕನೂ, ಚನ್ದ್ರಶೇಖರನೂ, ಹೃದಯಪುಣ್ಡರೀಕದೋಳ್ ಧ್ಯೇಯನೂ, ಚರಾಚರನಿಖಿಲಪ್ರಪಂಚಾಧಾರನೂ, ಕರ್ಮಫಲಭೋಗಶೂನ್ಯನೂ, ಪ್ರಾಕೃತಭೋಗರಹಿತನೂ, ಪಶುಪಾಶವಿಲಕ್ಷಣನೂ, ಕರುಣಾರಸರತ್ನಾಕರನೂ, ಅನನ್ತಕಲ್ಯಾಣಗುಣಗಣಪರಿಪೂರ್ಣನೂ'' ಇತ್ಯಾದಿ ಗುಣವಿಶಿಷ್ಟನೆಂದು ಪ್ರತಿಪಾದಿತನಾಗಿರುವ ಶ್ರೀಮಶ್ವರಶಿವಸ್ವಾಮಿಯ ಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾನವೈಭವನಾದ, ನಿಖಿಲನಿಗಮಾಗಮೇತಿಹಾಸಸ್ಮೃತಿ ಪುರಾಣಪದವಾಕ್ಯ ಪ್ರಮಾಣಪಾರಾವಾರಪಾರೀಣನಾದ, ನಿರಾಭಾರ ವೀರಶೈವಸಾಮ್ರಾಜ್ಯಧುರನ್ಧರನಾದ, ಶ್ರೀತೋಂಟದ ಸಿದ್ಧೇಶ್ವರ ನೆಂಬಾಚಾರ್ಯನಿಂ ಕರ್ಣಾಟಭಾಷಾರೂಪಮಾಗಿ ಸ್ವಕಪೋಲಕಲ್ಪಿತಮಲ್ಲದೆ ಸೋಪಷ್ಟಮ್ಭಕಮಾಗಿ ರಚಿಸಲ್ಪಡುವ ಈ ಷಟ್ಸ್ಥಲಕೌಮುದಿ ಎಂಬ ಗ್ರನ್ಥದಲ್ಲಿ ಷಟ್ಸ್ಥಲಪ್ರಕರಣ ಅಷ್ಟಾವರಣಪ್ರಕರಣ ವೆಂದೆರಡು ಪ್ರಕರಣಗಳು ನಿರೂಪಿಸಲ್ಪಡುವುವು. ಷಟ್ಸ್ಥಲಪ್ರಕರಣದಲ್ಲಿ ಭಕ್ತ ಮಾಹೇಶ ಪ್ರಸಾದಿ ಪ್ರಾಣಲಿಙ್ಗಿ ಶರಣ ಐಕ್ಯಸ್ಥಲಂಗಳ ಲಕ್ಷಣನಿರೂಪಣವೂ, ಪ್ರಕಾರಾನ್ತರದಿಂದ ಷಟ್ಸ್ಥಲನಿರೂಪಣವೂ, ಅಷ್ಟಾವರಣಪ್ರಕರಣದಲ್ಲಿ ಗುರು ಲಿಙ್ಗ ಜಙ್ಗಮ ಭಸ್ಮ ರುದ್ರಾಕ್ಷ ಮನ್ತ್ರ ತೀರ್ಥಪ್ರಸಾದ ಲಕ್ಷಣ ಮೊದಲಾದ ಸತ್ಕ್ರಿಯಾಚಾರಗಳೂ ಸಪ್ರಮಾಣವಾಗಿ ನಿರೂಪಿಸಲ್ಪಡುವುವು.



# ಷಟ್ಸ್ಥಲಪ್ರಕರಣ ಪ್ರಾರಂಭವು.

## ಭ ಕ್ತ ಸ್ಥ ಲ ಮ್.



ಎಲೈ ವಿದ್ವಾಂಸನಹ ಸೂತಮುನೀಶ್ವರನೇ! ನಿನ್ನಿಂದೆಮಗೆ ವೀರಮಾಹೇಶ್ವರಿಂ ಪೂಜ್ಯರಾದ ಶಿವಯೋಗಿಗಳ ವರ್ತನಕ್ರಮವು ನಿರೂಪಿತಮಾಯಿತು, ಈಗ ಷಟ್ಸ್ಥಲವಂ ನಿರೂಪಿಸು ಎಂಬದಾಗಿ ಶೌನಕಾದಿ ಮುನಿಗಳು ಕೇಳಿದರೆಂಬಲ್ಲಿ ಸಾಕ್ಷಿಯು:—

" ಭವತಾಕಥಿತಾವೃತ್ತಿರ್ವೀರಮಾಹೇಶ್ವರಾರ್ಚಿತಾ ||
ಅಸ್ಮಾಕಂಸಾಮ್ಪ್ರತಂ ವಿದ್ವನ್ವದ ಷಟ್ಸ್ಥಲನಿರ್ಣಯಮ್ "

ಸೂತಮುನೀಶ್ವರನು ನಿರೂಪಿಸಿದುದೇನೆಂದರೆ:—

ಭಾಗ್ಯವನುಳ್ಳವರಿಗೆ ಶ್ರೇಷ್ಠರಹ ಎಲೆ ಮುನಿಗಳಿರಾ! ಉಮಾಪತಿಯಾದ ಪರಮೇಶ್ವರನು ಷಣ್ಮುಖನಿಗಾಗಿ ಯಾವ ಶ್ರೇಷ್ಠವಾದ ಷಟ್ಸ್ಥಲಗಳಂ ನಿರೂಪಿಸಿದನೋ, ಅವುಗಳನ್ನು ವಿಸ್ತಾರದಿಂ ಹೇಳುವೆನು. ಎಂಬಲ್ಲಿ ಸಾಕ್ಷಿಯು—

" ವಕ್ಷ್ಯೇಭಾಗ್ಯವತಾಂಶ್ರೇಷ್ಠಾಃ! ಷಟ್ಸ್ಥಲಾನಿ ಸಮಾಸತಃ ||
ಯಾನಿಶಕ್ತಿಧರಾಯಾಹ ಶ್ರೀಕಣ್ಠಃ ಪಾರ್ವತೀಪತಿಃ "

ಪೂರ್ವದಲ್ಲಿ ಷಣ್ಮುಖನು—ನಾನಾ ರತ್ನಗಳಿಂದಲಂಕೃತವಾದ ಕೈಲಾಸಪರ್ವತದ ಶಿಖರದಲ್ಲಿ ಲೇಸಾಗಿ ಕುಳಿತವನೂ, ಪಾರ್ವತೀದೇವಿಯೊಡನೆ ಕೂಡಿದವನೂ, ಉತ್ಕೃಷ್ಟವಹ ದೇವನೂ, ಮಙ್ಗಳಸ್ವರೂಪನೂ, ಗಂಗೆಯಂ ಜಟಾಮಕುಟದಲ್ಲಿ ಧರಿಸಿದವನೂ, ಅತಿಶಯ ಸೌಂದರ್ಯದಿಂದೊಪ್ಪುತ್ತಿರುವ ನೇತ್ರಗಳುಳ್ಳವನೂ, ಹವಣಿಸಲ್ಬಾರದ ತೇಜಸ್ಸುಳ್ಳವನೂ, ವಿಷಕಣ್ಠನೂ, ಆದ ಶಿವಸ್ವಾಮಿಯನ್ನು ನಮಿಸಿದವನಾಗಿ, ಷಟ್ಸ್ಥಲನಿರ್ಣಯವಂ ಬೆಸಗೊಂಡನು. ಎಂಬಲ್ಲಿ ಸಾಕ್ಷಿಯು—

" ಪುರಾ ಕೈಲಾಸಶಿಖರೇ ನಾನಾರತ್ನ ವಿಭೂಷಿತೇ ||
ಸಮಾಸೀನಂ ಮಹಾದೇವಂ ಪಾರ್ವತ್ಯಾಸಹಿತಂ ಶಿವಮ್ ||
ಗಙ್ಗಾಧರಂ ವಿರೂಪಾಕ್ಷಂ ಶ್ರೀಕಣ್ಠಮಮಿತೌಜಸಮ್ |
ಪಪ್ರಚ್ಛಪ್ರಣತೋ ಭೂತ್ವಾಸ್ಕನ್ದಷ್ಷಟ್ಸ್ಥಲನಿರ್ಣಯಮ್ "

ಎಲೆ ತಂದೆಯೇ! ನಿನ್ನ ಅನುಗ್ರಹದ ದೆಸೆಯಿಂದ ನಾನು ವೀರಶೈವಾಚಾರಕ್ರಮವಂ ಕೇಳಿ ತಿಳಿದೆನು. ದೇವದೇವನಾದ ಸ್ವಾಮಿಾ! ಈಗ ನನಗೆ ಷಟ್ಸ್ಥಲನಿರ್ಣಯವಂ ನಿರೂಪಿಸು. ಎಂದು ಕೇಳಿದನೆಂಬಲ್ಲಿ ಸಾಕ್ಷಿಯು—

" ತ್ವತ್ಪ್ರಸಾದಾಚ್ಛ್ರುತಸ್ತಾತ ! ವೀರಶೈವಕ್ರಿಯಾಕ್ರಮಃ ||
ಇದಾನೀಂ ದೇವದೇವೇಶ ! ವದಷಟ್ಸ್ಥಲನಿರ್ಣಯಮ್ "

ಎಲೈ ಷಣ್ಮುಖನೇ ! ಸರ್ವಶಾಸ್ತ್ರಂಗಳಲ್ಲಿ ಸಾರವೂ, ಗೋಪ್ಯವೂ ಆದ ಷಟ್ಸ್ಥಲ ನಿರ್ಣಯವನ್ನು ಸಂಗ್ರಹದಿಂ ನಿನಗೆ ನಿರೂಪಿಸುವೆನು ಎಂಬಲ್ಲಿ ಸಾಕ್ಷಿಯು.

" ವಕ್ಷ್ಯಾಮಿ ಸಙ್ಗ್ರಹೇಣಾಹಂ ತವ ಷಟ್ಸ್ಥಲನಿರ್ಣಯಮ್ ||
ಸಾರಂ ಸಮಸ್ತಶಾಸ್ತ್ರೇಷು ರಹಸ್ಯಞ್ಚ ಷಡಾನನ !"

ಶಿವಾದಿ ಭೂಮ್ಯನ್ತವಾದ ಸಮಸ್ತ ತತ್ತ್ವಗಳಿಗೆ ಸ್ಥಾನಪಾದತ್ತಣಿಂದಮುಂ ತತ್ವಂಗಳಡಗಿಸಿಕೊಂಡಿಹತನದಿಂದಮುಂ ಸ್ಥಲವೆಂದು ಹೇಳಲ್ಪಡುತ್ತಿಹುದು. ಎಂಬಲ್ಲಿ ಸಾಕ್ಷಿಯು.—

" ಸರ್ವೇಷಾಂ ಸ್ಥಾನಭೂತತ್ವಾತ್ ಲಯಭೂತತ್ವತಸ್ಸದಾ ||
ತತ್ವಾನಾಂ ಮಹದಾದೀನಾಂ * ಸ್ಥಲಮಿತ್ಯಭಿಧೀಯತೇ "

ಯಾವ ಪರಬ್ರಹ್ಮ ಶಿವನಲ್ಲಿ ಮುಕ್ತಿಯು ಇರುತ್ತಿಹುದೋ, ಆ ಕಾರಣದಿಂ ಸ್ಥಳ ವೆಂದು ಸ್ಥಳತತ್ವವಂ ಬಲ್ಲವರಿಂ ನುಡಿಯಲ್ಪಟ್ಟಿತು ಎಂಬಲ್ಲಿ ಸಾಕ್ಷಿಯು.—

" ಸ್ಥೀಯತೇ ಲೀಯತೇ ಯಸ್ಮಿನ್ ಮುಕ್ತಿಸ್ಸಂಸಾರಪದ್ಧತೇಃ ||
ತದೇವ ಸ್ಥಲಮಿತ್ಯುಕ್ತಂ ಸ್ಥಲತತ್ವವಿಶಾರದೈಃ "

ಸ್ಥಲ ಶಬ್ದಕ್ಕೆ ಮತ್ತೊಂದು ಪ್ರಕಾರವಾಗಿ ನಿರ್ವಚನವು ಹೇಳಲ್ಪಡುತ್ತಿರುವುದೆಂತೆನೆ—ಯಾವ ಕಾರಣದಿಂದ ಸಮಸ್ತ ತತ್ವಂಗಳಿಗಾಶ್ರಯವೂ, ಕಡೆಯಿಲ್ಲದದೂ, ಸಚ್ಚಿದಾನನ್ದಸ್ವರೂಪವೂ, ಪರಬ್ರಹ್ಮವೂ, ತ್ರಿಲೋಕಕ್ಕೆ ಮೂಲಸ್ತಮ್ಭವೂ ಸ್ಥಾಣುವೆಂಬ ನಾಮವುಳ್ಳುದೂ ಆದ ಯಾವ ಶಿವತತ್ವದಲ್ಲಿ ಜಗದ್ವಿಸ್ತಾರವು ಅಡಗಿತೋ, ಆ ಕಾರಣದಿಂದ ಅದು ಸ್ಥಲವೆಂದು ಹೇಳಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.

" ಸ್ಥಾಣೌ ಸರ್ವಾಶ್ರಯೇಽನನ್ತೇ ಸಚ್ಚಿದಾನನ್ದರೂಪಿಣಿ ||
ಯಸ್ಮಿನ್ಬ್ರಹ್ಮಣಿ ಲೀಯೇತ ಪ್ರಪಞ್ಚಸ್ತತ್ಸ್ಥಲಂಸ್ಮೃತಮ್ "

ಶಿವನೆಂಬ ಹೆಸರನ್ನುಳ್ಳ ಆ ಪರಬ್ರಹ್ಮವು—ಸ್ಥಲವೆಂಬ ಶಬ್ದದಿಂ ಪ್ರತಿಪಾದ್ಯಮಾನವಾಗಿ, ತನ್ನ ಜ್ಞಾನಶಕ್ತಿಯಿಂ ವೀರಮಾಹೇಶ್ವರರಿಂದಾದರಿಸಲ್ಪಟ್ಟ ಮೋಕ್ಷಮಾರ್ಗಕ್ಕೆ ಮುಖ್ಯವಹ ಸೋಪಾನವಾದ ಆರುಪ್ರಕಾರವಹ ಭೇದವನುಳ್ಳದ್ದಾಗುತ್ತಿಹುದು ಎಂಬಲ್ಲಿ ಸಾಕ್ಷಿಯು.

* 'ಸ್ಥ' ಎಂಬ ಶಬ್ದವು—ಸ್ಥಾನಾರ್ಥಕವಾದದ್ದು. 'ಲ' ಎಂಬ ಶಬ್ದವು—ಲಯಾರ್ಥಕವಾದದ್ದು.

" ತದ್ಬ್ರಹ್ಮ ಸ್ಥಲಶಬ್ದೇನ ಸ್ವಶಕ್ತ್ಯಾ ಷಡ್ವಿಧಂ ಭವೇತ್ ||
ಮೋಕ್ಷಮಾರ್ಗೈಕಸೋಪಾನಂ ವೀರಮಾಹೇಶ್ವರಾದೃತಮ್ "

ಮನುಷ್ಯನು—ಆವ ಷಟ್ಸ್ಥಲವನರಿವುದರಿಂ ಮೋಕ್ಷವನ್ನು ಆಯಾಸವಿಲ್ಲದೆ ಐದುತ್ತಿಹನೋ ಆ ಷಟ್ಸ್ಥಲದ ಹೆಸರುಗಳನ್ನೂ ಅವುಗಳ ಸ್ವರೂಪವನ್ನೂ ಸಂಪೂರ್ಣವಾಗಿ ನಿರೂಪಿಸುವೆನು. ಎಂಬಲ್ಲಿ ಸಾಕ್ಷಿಯು.—

" ತಸ್ಯ ನಾಮಾನಿ ವಕ್ಷ್ಯಾಮಿ ಸ್ವರೂಪನ್ತೇ ಸಮಾಸತಃ ||
ಯದ್ಜ್ಞಾನೇನ ನರೋ ಮುಕ್ತಿ ಮನಾಯಾಸೇನ ಗಚ್ಛತಿ "

ಭಕ್ತಸ್ಥಲವು, ಮಾಹೇಶ್ವರಸ್ಥಲವು, ಪ್ರಸಾದಿಸ್ಥಲವು' ಪ್ರಾಣಲಿಂಗಿಸ್ಥಳವು, ಶರಣಸ್ಥಲವು, ಐಕ್ಯಸ್ಥಲವು ಈ ಪ್ರಕಾರವಾದ ಷಟ್ಸ್ಥಲವು—ನನಗೆ ಪ್ರಿಯವಾದದ್ದು, ಎಂಬಲ್ಲಿ ಸಾಕ್ಷಿಯು.—

" ಭಕ್ತೋಮಾಹೇಶ್ವರಶ್ಚೈವ ಪ್ರಸಾದೀ ಪ್ರಾಣಲಿಙ್ಗಕಃ ||
ಶರಣಶ್ಶಿವಲಿಂಗೈಕ್ಯಃ ಷಟ್ಸ್ಥಲಙ್ಮ ಮಮ ಪ್ರಿಯಮ್ "

ಎಂದು ಷಣ್ಮುಖನಿಗೆ ಶಿವನು ನಿರೂಪಿಸಿದ ವಾಕ್ಯಂಗಳನ್ನು ಸೂತಮುನೀಶ್ವರನು ಶೌನಕಾದಿ ಮುನಿಗಳಿಗೆ ನಿರೂಪಿಸಿದ್ದು.



ಅನನ್ತರದೊಳೀಪ್ರಕಾರವಾದ ಷಟ್ಸ್ಥಲ ಲಕ್ಷಣಂಗಳಂ ಭಕ್ತಸ್ಥಲಮೊದಲ್ಗೊಂಡು ಪೇಳುವಲ್ಲಿ' ತದಾದಿಯೊಳ್ ಭಕ್ತಸ್ಥಲ ಲಕ್ಷಣಕ್ರಮವದೆಂತೆನೆ.—

ಸದಾಚಾರವು, ಶಿವನಲ್ಲಿ ಭಕ್ತಿಯು, ಶಿವಲಿಂಗದಲ್ಲೂ ಗುರುವಿನಲ್ಲೂ ಜಂಗಮನಲ್ಲೂ ಒಂದೇ ಪ್ರಕಾರವಾದ ಬುದ್ಧಿಯು ಭಸ್ಮ ರುದ್ರಾಕ್ಷಧಾರಣ ಮೊದಲಾದ ಶಿವಚಿಹ್ನಗಳುಳ್ಳ ಸುಚರಿತ್ರರಾದ ಶಿವಭಕ್ತರಲ್ಲಿ ಭಕ್ತಿಯು ಇರುವುದೇ ಉತ್ತಮವಾದ ಭಕ್ತಲಕ್ಷಣವು. ಎಂಬಲ್ಲಿ ಸಾಕ್ಷಿಯು.—

" ಸದಾಚಾರಶ್ಶಿವೇ ಭಕ್ತಿರ್ಲಿಂಗೇ ಜಙ್ಗಮ ಏಕಧೀಃ ||
ಲಾಞ್ಛನೇ ಶರಣೇ ಭಕ್ತಿರ್ಭಕ್ತಸ್ಥಲ ಮನುತ್ತಮಮ್ "

ಭಸ್ಮರುದ್ರಾಕ್ಷ ಧಾರಣದೊಡನೆ ಯಾವಾಗಲೂ ನಿಮಿಷಮಾದರೂ ಅಗಲು ಎಕೆಯಿಲ್ಲದೆ ಲಿಙ್ಗಧಾರಿಯಾಗಿ, ಇದರಿಂದ ಯಾವಾಗಲೂ ಪರಿಶುದ್ಧನಾಗಿ, ಪಂಚಾಕ್ಷರ ಮನ್ತ್ರಜಪೋದ್ಯೋಗಶಾಲಿಯಾದವನೇ ಶಿವಭಕ್ತನು ಎಂಬಲ್ಲಿ ಸಾಕ್ಷಿಯು.

" ಭೂತಿರುದ್ರಾಕ್ಷಸಂಯುಕ್ತೋ ಲಿಙ್ಗಧಾರೀ ಸದಾಶುಚಿಃ ||
ಪಞ್ಚಾಕ್ಷರ ಜಪೋದ್ಯೋಗೀ ಶಿವಭಕ್ತ ಇತಿ ಸ್ಮೃತಃ "

ಶಿವಕಥಾಶ್ರವಣವು, ಶಿವನಂ ಸ್ತುತಿಸುವುದು, ಶಿವಚಿನ್ತೆಯು, ಶಿವಸೇವೆಯು, ಶಿವಪೂಜೆಯು, ಶಿವನಂ ನಮಿಸುವುದು, ಶಿವನಿಗೆ ಭೃತ್ಯನಾಗಿರುವುದು, ಶಿವನೊಡನೆ ಗೆಳೆತನವು, ಶಿವನಿಗೆ ಸ್ವಾತ್ಮವನರ್ಪಿಸುವುದು ಈ ಪ್ರಕಾರದಿಂ ಭಕ್ತಿಯು ಒಂಭತ್ತು ಬಗೆಯಾಗಿರ್ಪುದೆಂದು ಮಹಾದೇವನಿಂ ನಿರೂಪಿಸಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.

"ಶ್ರವಣಂ ಕೀರ್ತನಂ ಶರ್ವ್ವಸ್ಯಸ್ಮರಣಂ ಪಾದಸೇವನಮ್ ||
ಅರ್ಚನಂ ವನ್ದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ||
ಏವಂ ನವವಿಧಾ ಭಕ್ತಿಃ ಪ್ರೋಕ್ತಾ ದೇವೇನ ಶಮ್ಭುನಾ"

ಈಭಕ್ತಿಯು—ಲೋಕದೊಳ್ ಪಾಪಿಗಳಿಗೆ ದೊರಕುವುದಿಲ್ಲವು, ಪುಣ್ಯವನ್ತರಿಗಾದರೋ ಸುಲಭವಾದುದು. ಎಂಬಲ್ಲಿ ಸಾಕ್ಷಿಯು.—

"ದುರ್ಲಭಾ ಪಾಪಿನಾಂ ಲೋಕೇ ಸುಲಭಾ ಪುಣ್ಯಕರ್ಮಣಾಮ್"

ಈ ಪ್ರಕಾರವಾದ ಶಿವಭಕ್ತಿಯು—ಬಾಹ್ಯವೆಂದೂ, ಅಭ್ಯನ್ತರವೆಂದೂ ಎರಡುಬಗೆಯಾಗಿರುತ್ತದೆ. ಮನುಷ್ಯನು ಜಗತ್ಸೃಷ್ಟಿಸ್ಥಿತಿಲಯಂಗಳಿಗೆ ಕರ್ತೃವಾದ ಪರಮಾತ್ಮಲಿಙ್ಗವುಳ್ಳ, ಮತ್ತಂ ಚಿಜ್ಜ್ಯೋತಿಸ್ಸ್ವರೂಪ ಸ್ವಾತ್ಮಾಭೇದವೆಂಬ ಚಿಹ್ನವುಳ್ಳ ಪೂರ್ವೋಪಕ್ರಾನ್ತಮಹಿಮೆಯಂ ಪಡೆದ ಲಿಂಗವನ್ನು—ವಾಮಹಸ್ತ ಕಮಲವೆಂಬ ಪೀಠಧ ಮಧ್ಯದಲ್ಲಿರಿಸಿ, ವಿಷಯಾನ್ತರ ಸಮ್ಪರ್ಕವಿಲ್ಲದುದಾಗಿ, ಆ ಲಿಙ್ಗದಲ್ಲಿ ಮುಖ್ಯಾಸಕ್ತಿಯನ್ನು ಹೊಂದಿದ ತನ್ನ ಬುದ್ಧಿಯಿಂದ ನಿರತಿಶಯಮಾಹಾತ್ಮ್ಯಧ್ಯಾನದಿಂದಲೂ, ಆವಾಹನಾರ್ಚನಾದಿಬಾಹ್ಯೋಪಚಾರಂಗಳಿಂದಲೂ ಪೂಜಿಸುವುದೇ ಬಾಹ್ಯಭಕ್ತಿಯು. ಎಂಬಲ್ಲಿ ಸಾಕ್ಷಿಯು.—

"ತದೇವ ಹಸ್ತಾಮ್ಬುಜಪೀಠಮಧ್ಯೇ
ನಿಧಾಯ ಲಿಙ್ಗಂ ಪರಮಾತ್ಮಚಿಹ್ನಮ್ ||
ಸಮ್ಪೂಜಯೇದೇಕಧಿಯೋಪಚಾರೈಃ
ನರಸ್ಸಬಾಹ್ಯಾನ್ತರ ಭೇದಭಿನ್ನೈಃ"

ಶಿವಕಲಾರೂಪವಾದ ಲಿಙ್ಗದಲ್ಲಿ ಪ್ರಾಣವನಿರಿಸಿ, ಜೀವಕಲಾರೂಪವಾದ ಪ್ರಾಣದಲ್ಲಿ ಆ ಲಿಙ್ಗವನಿರಿಸಿ, ಮನಸ್ಸಿಗೆ ಸ್ಥೈರ್ಯವನ್ನುಂಟುಮಾಡಿ, ಮತ್ತಾವುದನ್ನೂ ಚಿನ್ತಿಸದಿದ್ದರೆ, ಆ ಲಿಙ್ಗಪ್ರಾಣ ಸಮರಸರೂಪಮಾದ ಚಿಂತೆಯು ಅಭ್ಯನ್ತರ ಭಕ್ತಿಯೆಂದು ಶಿವಯೋಗಿಗಳಿಂ ಪೇಳಲ್ಪಡುತ್ತದೆ. ಆ ಭಕ್ತಿಯು ಯಾವ ಪುರುಷನಲ್ಲಿರುತ್ತದೆಯೋ, ಆತನ ಜೀವನವು ಹುರಿಯಲ್ಪಟ್ಟ ಚಣಕಾದಿ ಬೀಜಗಳಂತೆ ಭೋಗಮಾತ್ರಕ್ಕೆ ಯೋಗ್ಯಮಲ್ಲದೆ ಪುನರುತ್ಪತ್ತಿಗೆ ಕಾರಣಮಲ್ಲವು ಎಂಬಲ್ಲಿ ಸಾಕ್ಷಿಯು.—

" ಲಿಂಗೇ ಪ್ರಾಣಂ ಸಮಾಧಾಯ ಪ್ರಾಣೇ ಲಿಙ್ಗನ್ತು ಶಾಮ್ಭವಮ್ ||
ಸ್ವಸ್ಥಂ ಮನಸ್ತಥಾ ಕೃತ್ವಾ ನ ಕಿಞ್ಚಿಚ್ಚಿನ್ತಯೇದ್ಯದಿ ||
ಸಾಭ್ಯನ್ತರಾ ಭಕ್ತಿರಿತಿ ಪ್ರೋಚ್ಯತೇ ಶಿವಯೋಗಿಭಿಃ ||
ಸಾ ಯಸ್ಮಿನ್ವರ್ತತೇ ತಸ್ಯ ಜೀವನಂ ಭ್ರಷ್ಟಬೀಜವತ್ "

ಬಹುಮಾತಿನಿಂ ಪ್ರಯೋಜನಮಿಲ್ಲವು. ಈ ಹೇಳಲ್ಪಟ್ಟ ಶಿವಭಕ್ತಿಯು ಗೋಪ್ಯತಮವಾದದ್ದು, ಆ ಭಕ್ತಿಯುಳ್ಳವನು ಮುಕ್ತನೇ ಸರಿ. ಈ ಅರ್ಥದಲ್ಲಿ ಸಂಶಯಮಿಲ್ಲಂ. ಎಂಬಲ್ಲಿ ಸಾಕ್ಷಿಯು.—

" ಬಹುನಾತ್ರಕಿಮುಕ್ತೇನ ಗುಹ್ಯಾದ್ಗುಹ್ಯತರಾಪರಾ ||
ಶಿವಭಕ್ತಿರ್ನಸನ್ದೇಹಸ್ತಯಾ ಮುಕ್ತೋ ನ ಸಂಶಯಃ "

ಆ ಭಕ್ತಿಯು—ಶಿವಪ್ರಸಾದದಿಂದಲೇ ಉಂಟಾಗುವುದು, ಆ ಭಕ್ತಿಯಿಂ ಶಿವಪ್ರಸಾದಮುಂಟಪ್ಪುದು. ಹಾಗಾದೊಡೆ ಅನ್ಯೋನ್ಯಾಶ್ರಯ ದೋಷಮುಂಟಪ್ಪುದೆನೆ, ಆ ದೋಷವು ಜ್ಞಪ್ತಿಯಲ್ಲಿಯೇ ಸರಿ. ಬೀಜದಿಂದಙ್ಕುರ ಮಙ್ಕುರದಿಂ ಬೀಜವು ಹುಟ್ಟುವಂತೆ ಬೀಜಾಙ್ಕುರನ್ಯಾಯದಿಂದುತ್ಪತ್ತಿಯಲ್ಲಿ ವಿರೋಧಮಿಲ್ಲವೆಂಬಲ್ಲಿ ಸಾಕ್ಷಿಯು.

" ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಮ್ಭವಃ ||
ಯಥೈವಾಙ್ಕುರತೋ ಬೀಜಂ ಬೀಜತೋ ವಾ ಯಥಾಙ್ಕುರಃ "

ಶಿವಪ್ರಸಾದದಿಂದುಂಟಾಗಿ ಮುಕ್ತಿಯಂ ಕೊಡುವ ಯಾವ ಭಕ್ತಿಯುಂಟೋ, ಅದು—ಮಾನವರಿಂದೊಂದುಜನ್ಮದಿಂದಲೇ ಪಡೆಯಶಲಕ್ಯಮೆಂಬಲ್ಲಿ ಸಾಕ್ಷಿಯು.—

" ಪ್ರಸಾದಪೂರ್ವಿಕಾ ಯೇಯಂ ಭಕ್ತಿರ್ಮುಕ್ತಿವಿಧಾಯಿನೀ ||
ನೈವ ಸಾ ಶಕ್ಯತೇ ಪ್ರಾಪ್ತುಂ ನರೈರೇಕೇನ ಜನ್ಮನಾ "

ಈ ಭಕ್ತಿಯು ಎಷ್ಟು ಜನ್ಮಗಳು ಕಳೆದ ಬಳಿಕ ದೊರಕುವುದೆಂದರೆ,—ಬಹು ಜನ್ಮಗಳಿಂದಲೂ ಮಾಡಿದ ಶಿವಧ್ಯಾನ ಶಿವಪೂಜಾದಿ ಸತ್ಕರ್ಮದಿಂ ಶುದ್ಧಾನ್ತಃಕರಣರಾಗಿ ಶ್ರುತಿಸ್ಮೃತ್ಯುಕ್ತವಾದ ನಿತ್ಯನೈಮಿತ್ತಿಕ ಕರ್ಮಂಗಳಲ್ಲಿ ನಿಷ್ಠೆಯುಳ್ಳವರಾಗಿ ಕಾಮ್ಯಕರ್ಮಂಗಳಲ್ಲಿ ಅಪೇಕ್ಷೆಯಿಲ್ಲದವರಾದ ಸುಜ್ಞಾನಿಗಳಿಗೆ ಶಿವನು ಪ್ರಸನ್ನನಹನು, ಶಿವನು ಪ್ರಸನ್ನನಾಗಲು ಭಕ್ತನು ಮುಕ್ತನಹನು, ಮುಕ್ತನು ಶಿವಸಮಾನನಹನು. ಅಲ್ಪಭಕ್ತಿಯುಳ್ಳವನು—ಮೂರು ಜನ್ಮಗಳು ಕಳೆದನಂತರ ಮುಕ್ತನಹನು. ಎಂಬಲ್ಲಿ ಸಾಕ್ಷಿಯು.—

" ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಮ್ ||
ಪ್ರಬುದ್ಧಾನಾಂ ವಿರಕ್ತಾನಾಂ ಪ್ರಸೀದತಿ ಮಹೇಶ್ವರಃ ||
ಪ್ರಸನ್ನೇ ಸತಿ ಮುಕ್ತೋಽಭೂಸ್ಮುಕ್ತಃ ಶಿವಸಮೋ ಭವೇತ್ ||
ಅಲ್ಪಭಕ್ತ್ಯಾಽಪಿ ಯೋಮರ್ತ್ಯಃ ತಸ್ಯ ಜನ್ಮತ್ರಯಾತ್ಪರಮ್ "

ಇಲ್ಲಿ ಶಿವಸಮಾನನೆಂದರೆ ಅಭೇದವೆಂದು ತಿಳಿಯಲ್ಪಡತಕ್ಕದು. " ನ ತತ್ಸಮ ಶ್ಚಾಭ್ಯಧಿಕಶ್ಚ ದೃಶ್ಯತೇ " ಎಂಬ ಶ್ರುತಿಯುಂಟಾಗಿ, ಶಿವ ಸಮಾನನಾಗುವುದಿಲ್ಲವೆಂ ದರೆ " ಶಿವಸ್ವರೂಪೋ ಭವತಿ ಶಿವ ಸ್ವರೂಪೋ ಭವತಿ " ಎಂಬ ಶ್ರುತಿಯುಂಟಾಗಿ, ಶಿವಸ್ವರೂಪನಾಗುವನು, ಶಿವ ಸ್ವರೂಪನಾಗುವನೆಂದರೆ ಶಿವಸಮಾನನಾಗುವನೆಂಬ ಅರ್ಥವು.

ವೀರಶೈವರಿಗೆ—ಒಂದೇ ಜನ್ಮದಲ್ಲಿ ಮುಕ್ತಿಯುಂಟಾಗುವುದು. ಅಲ್ಪಭಕ್ತಿ ಮತವುಳ್ಳ ಇತರ ಶೈವರಿಗೆ ಮೂರುಜನ್ಮಗಳು ಕಳೆದನಂತರದಲ್ಲಿ ಮುಕ್ತಿಯುಂಟಾ ಗುವುದು. ಎಂಬಲ್ಲಿ ಸಾಕ್ಷಿಯು.—

" ಏಕೇನ ಜನ್ಮನಾ ಮುಕ್ತಿರ್ವೀರಾಣಾಸ್ತು ಮಹೇಶ್ವರಿ ! ||
ಅನ್ಯೇಷಾಮಪಿ ಶೈವಾನಾಂ ಮುಕ್ತಿರ್ಜನ್ಮತ್ರಯಾತ್ಪರಮ್ "

ಪೂರ್ಣಭಕ್ತಿಯೆಂದರೇನು ? ಮುಕ್ತನಿಗೆ ಪುನರಾವೃತ್ತಿಯುಂಟೋ ಎಂ ದರೆ,—" ನ ಸ ಪುನರಾವರ್ತತೇ ನ ಸ ಪುನರಾವರ್ತತೇ " ಎಂಬ ಶ್ರುತಿಯುಂಟಾಗಿ ಯೋನಿಮುಖೋತ್ಪತ್ತಿಯಿಲ್ಲವು ಅಂದರೆ ಪುನರಾವೃತ್ತಿಯಿಲ್ಲವೆಂಬಲ್ಲಿ ಸಂಶಯಮಿಲ್ಲ. ಹೇಳಲ್ಪಟ್ಟ ಲಿಙ್ಗಧಾರಣ ವಿಶಿಷ್ಟವಾದ ನವವಿಧಭಕ್ತಿಯುಳ್ಳ ಸೇವೆಯೇ ಪೂರ್ಣ ಭಕ್ತಿಯೆಂದೆನಿಸಿ ಕೊಳ್ಳುವುದು. ಎಂಬಲ್ಲಿ ಸಾಕ್ಷಿಯು.—

" ನ ಯೋನಿಯನ್ತ್ರಪೀಡಾ ವೈ ಭವೇನ್ನೈವಾತ್ರ ಸಂಶಯಃ ||
ಸಾಙ್ಗಾನುಗಾ ಚ ಯಾ ಸೇವಾ ಸಾ ಭಕ್ತಿರಿತಿ ಕಥ್ಯತೇ "

" ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ" ಎಂಬ ಶ್ರುತಿಯುಂಟಾಗಿ, ಆ ಸಾಙ್ಗವಾದ ಭಕ್ತಿಯು—ಮನೋವಾಕ್ಕಾಯ ರೂಪ ಮಾದ ಕಾರಣದಿಂ ಮೂರು ತೆರನಾಗಿರ್ಪುದು, ಅದರಲ್ಲಿ ಶಿವಲಿಙ್ಗಾದಿ ಸ್ವರೂಪಚಿನ್ತೆ ಯೇ—ಮಾನಸಿಕ ಭಕ್ತಿಯೆಂದೆನಿಸಿಕೊಂಬುದು. ಶಿವಮನ್ತ್ರಜಪಸ್ತುತಿ ರೂಪಮಾ ದುದೇ—ವಾಚಕ ಭಕ್ತಿಯೆಂದೆನಿಸಿಕೊಳ್ಳುವುದು. ಕಾಯದಿಂ ಮಾಡುವ ಶಿವಲಿಙ್ಗ ಪೂಜೆಯೇ ಕಾಯಿಕ ಭಕ್ತಿಯೆಂದೆನಿಸಿಕೊಳ್ಳುವುದು. ಎಂಬಲ್ಲಿ ಸಾಕ್ಷಿಯು.—

" ಸಾ ಪುನರ್ಭಿದ್ಯತೇ ತ್ರೇಧಾ ಮನೋವಾಕ್ಕಾಯ ಸಾಧನೈಃ ||
ಶಿವರೂಪಾದಿ ಚಿನ್ತಾ ಯಾ ಸಾ ಸೇವಾ ಮಾನಸೀ ಸ್ಮೃತಾ ||
ಜಪಾದಿರ್ವ್ವಾಚಿಕೀ ಸೇವಾ ಕರ್ಮಪೂಜಾ ಚ ಕಾಯಕೀ "

ಈ ಪ್ರಕಾರವಾದ ತ್ರಿವಿಧಸೇವೆಯೇ ಬಾಹ್ಯಾದಿ ಭೇದದಿಂ ತ್ರಿವಿಧವಾಗಿರ್ಪುದುದದೆಂತೆನೆ.—ವೇಧಾ ಮನು ಕ್ರಿಯಾ ರೂಪವಾದ ದೀಕ್ಷಾತ್ರಯದಿಂ ಕೂಡಿದ ಮನೋವಾಕ್ಕಾಯ ಭೇದವುಳ್ಳ ಪೂರ್ವೋಕ್ತವಾದ ಸೇವೆಯು ಬಾಹ್ಯವೆಂದೂ ಆಭ್ಯನ್ತರವೆಂದೂ ಬಾಹ್ಯಾಭ್ಯನ್ತರವೆಂದೂ ಮೂರುಪ್ರಕಾರವಾಗಿರ್ಪುದೆಂದಭಿಜ್ಞರು ತಿಳಿಯುವರು. ಎಂಬಲ್ಲಿ ಸಾಕ್ಷಿಯು.—

" ಬಾಹ್ಯಮಾಭ್ಯನ್ತರಂ ಚೈವ ಬಾಹ್ಯಾಭ್ಯನ್ತರಮೇವವಾ ||
ಮನೋವಾಕ್ಕಾಯಭೇದೈಶ್ಚ ತ್ರಿಧಾ ತದ್ಭಜನಂ ವಿದುಃ "

ಇವುಗಳ ಸ್ವರೂಪಮೆಂತಹುದೆಂಬಲ್ಲಿ ಮಾನಸಾದಿ ಸ್ವರೂಪಪೂರ್ವಕವಾಗಿ ನಿರೂಪಿಸಲ್ಪಡುವುದೇನೆನೆ.—ಶಾಸ್ತ್ರೋಕ್ತವಾದ ಭಸ್ಮತ್ರಿಪುಣ್ಡ್ರ ರುದ್ರಾಕ್ಷಧಾರಣರೂಪವಾದ ಶಿವಚಿಹ್ನಗಳಿಂದಂಕಿತವಾಗಿ, ಲಿಙ್ಗಧಾರಣ ಪೂರ್ವಕವಾಗಿ ತತ್ಪೂಜಾಸಕ್ತವಾದುದೇ ಕಾಯವು. ಶಿವಧ್ಯಾನದಲ್ಲಿ ಯುಕ್ತವಾದುದೇ ಮನಸ್ಸು. ಶಿವನಾಮದಲ್ಲಿ ತತ್ಪರವಾದುದೇ ವಾಕ್ಕು. ಎಂಬಲ್ಲಿ ಸಾಕ್ಷಿಯು.—

" ಶಿವಸ್ಯ ಲಿಂಗೈರುದ್ದಿಷ್ಟೈಃ ಸ್ತ್ರಿಪುಣ್ಡ್ರಾದಿಭಿರಙ್ಕಿತಃ ||
ಶಿವೋಪಚಾರನಿರತಃ ಕಾಯೋ ನಾನ್ಯಃ ಪ್ರಕೀರ್ತಿತಃ ||
ಮನೋಮಹೇಶಧ್ಯಾನಾಢ್ಯಂ ನಾನ್ಯಧ್ಯಾನರತಂ ಮನಃ ||
ಶಿವನಾಮರತಾ ವಾಣೀ ವಾಙ್ಮತಾ ಚೈವ ನೇತರಾ "

ಬಾಹ್ಯಾದಿಗಳಂ ಲಕ್ಷಿಸುವುದದೆಂತೆನೆ.—ಪರದೃಷ್ಟಿಗೋಚರವಾದ ಶಿವಪೂಜಾದಿಕರ್ಮವು ಬಾಹ್ಯವು. ಅದೇ ಅನ್ಯದೃಷ್ಟಿಗೋಚರವಾಗದೆ ಸ್ವದೃಷ್ಟಿಗೆ ಮಾತ್ರ ಗೋಚರವಾದೊಡೆ ಆಭ್ಯನ್ತರವು. ಶಿವಲಿಙ್ಗದಲ್ಲಿ ಆಸಕ್ತಿಯುಳ್ಳ ಮನಸ್ಸು ಕಾಕಾಕ್ಷಿನ್ಯಾಯದಿಂದ ಉಭಯತ್ರ ವ್ಯಾಪ್ತವಾದ ಕಾರಣದಿಂ ಬಾಹ್ಯಾಭ್ಯನ್ತರವು. ಎಂಬಲ್ಲಿ ಸಾಕ್ಷಿಯು.—

" ಅನ್ಯಾತ್ಮವಿದಿತಂ ಬಾಹ್ಯಂ ಶಮ್ಭೋರಭ್ಯರ್ಚನಾದಿಕಮ್ ||
ತದೇವ ತು ಸ್ವಸಂವೇದ್ಯ ಮಾಭ್ಯನ್ತರಮುದಾಹೃತಮ್ ||
ಮನೋ ಮಹೇಶಪ್ರವಣಂ ಬಾಹ್ಯಾಭ್ಯನ್ತರಮುಚ್ಯತೇ "

ಆ ಪ್ರಕಾರವಾದ ಮಾನಸಾದಿ ಬಾಹ್ಯಾದಿ ರೂಪವಾದ ತ್ರಿವಿಧಸೇವೆಯೇ

ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನವೆಂದೈದುಪ್ರಕಾರಮಾಗಿಹುದು. ಎಂಬಲ್ಲಿ ಸಾಕ್ಷಿಯು.—

"ಪಞ್ಚಧಾ ಕಥ್ಯತೇ ಸದ್ಭಿಸ್ತದೇವ ಭಜನಂ ಪುನಃ ||
ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂಚೇತ್ಯನುಪೂರ್ವಕಮ್"

ಇವುಗಳ ಸ್ವರೂಪಮೆಂತೆನೆ:—ಶಿವನಿಗೋಸ್ಕರವೆಂದರೆ ಶಿವಲಿಙ್ಗಪೂಜಾರ್ಥಮಾಗಿ ಸಾಮಗ್ರಿಗಳಂ ಸಂಪಾದಿಸುವುದರಲ್ಲಿ ಶರೀರವಂ ಶೋಷಿಸೋಣವು ತಪಸ್ಸೆನಿಸಿಕೊಳ್ಳುವುದು. ಕೃಚ್ಛ್ರಚಾನ್ದ್ರಾಯಣಾದಿಗಳಿಂ ಶರೀರವಂ ಶೋಷಿಸೋಣವು ತಪಸ್ಸಲ್ಲ. ಲಿಙ್ಗಪೂಜೆಯೇ ಕರ್ಮವೆಂದು ತಿಳಿಯಲು ಯೋಗ್ಯವು. ತತ್ಫಲವು ಶಾಶ್ವತಮಾದದ್ದರಿಂದ. ತದ್ವ್ಯತಿರಿಕ್ತಮಾದ ಬಹು ಧನವ್ಯಯಾದಿಗಳಿಂ ಸಾಧ್ಯಮಪ್ಪ ಜ್ಯೋತಿಷ್ಟೋಮಾದಿ ಯಾಗಂಗಳು ಕರ್ಮವೆಂದು ಹೇಳಲ್ಪಡುವುದಿಲ್ಲ, ತತ್ಫಲವು ನಶ್ವರಮಾದ ಕಾರಣದಿಂದ. ಪಂಚಾಕ್ಷರಮನ್ತ್ರಾವೃತ್ತಿಯು, ಪ್ರಣವಾವೃತ್ತಿಯು, ಶ್ರೀರುದ್ರಾಧ್ಯಯನವು, ಶಿವಸಿದ್ಧಾನ್ತವಂ ಪೇಳುವ ಅಥರ್ವಶಿರಶ್ಶಿಖಾದ್ಯುಪನಿಷತ್ತುಗಳು, ತತ್ತತ್ಕರ್ಮೋಪಯೋಗ್ಯವಾದ ಮನ್ತ್ರಂಗಳು ಇವುಗಳ ಆವೃತ್ತಿಲಕ್ಷಣಾಭ್ಯಾಸವೇ ಜಪವು. "ತ್ರೈಗುಣ್ಯವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ" ಎಂದು ಶ್ರೀಕೃಷ್ಣನು ಹೇಳಿರುವುದರಿಂದ ಸಾಂಗವೇದಾಧ್ಯಯನ ಮೊದಲಾದುದು ಜಪವಲ್ಲವು. ಶಿವರೂಪವಾದ ಶಿವಲಿಙ್ಗದ ಚಿಂತೆಯೂ, ಚನ್ದ್ರಶೇಖರತ್ವಾದಿ ವಿಶಿಷ್ಟ ಸಕಲ ಮೂರ್ತಿಯ ಚಿಂತೆಯೂ ಇದೇ ಧ್ಯಾನವು. ಪರಿಮಿತ ಶರೀರೇನ್ದ್ರಿಯಾದ್ಯುಪಾಧಿವಿಷಯುಕವಾದ ತನ್ನ ಸ್ವರೂಪಚಿನ್ತೆಯು ಧ್ಯಾನವಲ್ಲವು. ಶಿವಾಗಮಾರ್ಥಮಾದ ಸ್ವಸಿದ್ಧಾನ್ತ ಪ್ರತಿಪಾದಕ ಶಾಸ್ತ್ರಾರ್ಥಜ್ಞಾನವೇ ಜ್ಞಾನವು. ಸಾಙ್ಖ್ಯಾದ್ಯನ್ಯಶಾಸ್ತ್ರಾರ್ಥಜ್ಞಾನವು ಜ್ಞಾನವಲ್ಲವು. ಎಂಬಲ್ಲಿ ಸಾಕ್ಷಿಯು.—

"ಶಿವಾರ್ಥೇ ದೇಹಸಂಶೋಷಸ್ತಪಃ ಕೃಚ್ಛ್ರಾದಿ ನೋ ಮತಮ್ ||
ಶಿವಾರ್ಚಾ ಕರ್ಮ ವಿಜ್ಞೇಯಂ ಬಾಹ್ಯಂ ಯಾಗಾದಿ ನೋಚ್ಯತೇ ||
ಜಪಃ ಪಞ್ಚಾಕ್ಷರಾಭ್ಯಾಸಃ ಪ್ರಣವಾಭ್ಯಾಸಏವ ವಾ ||
ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಮ್ ||
ಧ್ಯಾನಂ ಶಿವಸ್ಯ ರೂಪಾದಿಚಿನ್ತಾ ನಾತ್ಮಾದಿಚಿನ್ತನಮ್ ||
ಮಮಾಗಮಾರ್ಥವಿಜ್ಞಾನಂ ಜ್ಞಾನಂ ನಾನ್ಯಾರ್ಥವೇದನಮ್ ||
ಇತಿ ಪಞ್ಚಪ್ರಕಾರೋಯಂ ಶಿವಯಜ್ಞಃ ಪ್ರಕೀರ್ತಿತಃ"

ಈ ಪಂಚಯಜ್ಞಗಳಿಂದ ಯಾವನು—ಉತ್ಕೃಷ್ಟವಾದ ಭಕ್ತಿಯಿಂ ಕೂಡಿ

ದವನಾಗಿ, ಶಿವನನ್ನು ಪೂಜಿಸುತ್ತಾನೆಯೋ, ಆತನು—ಶಿವಭಕ್ತನೆಂದು ಹೇಳಲ್ಪಡುವನು. ಎಂಬಲ್ಲಿ ಸಾಕ್ಷಿಯು.—

"ಅನೇನ ಪಞ್ಚಯಜ್ಞೇನ ಯಃ ಪೂಜಯತಿ ಶಙ್ಕರಮ್ ||
ಭಕ್ತ್ಯಾ ಪರಮಯಾ ಯುಕ್ತಸ್ಸ ವೈ ಭಕ್ತ ಇತೀರಿತಃ"

ಈ ಪ್ರಕಾರಮಾದ ಶಿವಭಕ್ತನಂ ಪೂಜಿಸುವುದರಿಂದ ಸದ್ಗತಿಯು ದೊರಕುವುದು. ಆತಂಗವಮಾನವಂ ಮಾಡುವುದರಿಂದ ಭೀಕರ ನರಕಪ್ರಾಪ್ತಿಯಹುದು. ಈ ವಿಷಯದಲ್ಲಿ ಸಂದೇಹವಿಲ್ಲವು. ಎಂಬಲ್ಲಿ ಸಾಕ್ಷಿಯು.—

"ಪೂಜನಾಚ್ಛಿವಭಕ್ತಸ್ಯ ಪುಣ್ಯಾ ಗತಿರವಾಪ್ಯತೇ ||
ಅವಮಾನಾನ್ಮಹಾಘೋರೋ ನಿರಯೋ ನಾತ್ರಸಂಶಯಃ"

ಶಿವಭಕ್ತನು—ಮಹಾತೇಜಸ್ಸುಳ್ಳವನಾದುದರಿಂ, ಶಿವಭಕ್ತರಲ್ಲದವರ ದರ್ಶನ ಸ್ಪರ್ಶನ ಸಹವಾಸಂಗಳನ್ನು ಒಂದುಬಾರಿಯೂ ಮಾಡಲಾಗದು, ಮಾಡಿದೊಡೆ ಅವನಿಗೆ ತೇಜೋಮಾಂದ್ಯವಹುದು. ಎಂಬಲ್ಲಿ ಸಾಕ್ಷಿಯು.—

"ಶಿವಭಕ್ತೋ ಮಹಾತೇಜಾಶ್ಶಿವಭಕ್ತಿ ಪರಾಙ್ಮುಖಾನ್ ||
ನ ಸ್ಪೃಶೇನ್ನೈವ ವೀಕ್ಷೇತ ನ ತೈಸ್ಸಹ ವಸೇತ್ಕ್ವಚಿತ್"

ತನ್ನ ವೀರಶೈವಾಚಾರ ಮಾರ್ಗದಲ್ಲಿ ವಿಮುಖರಾದ ಶಿವದೀಕ್ಷಾಖ್ಯ ಸಂಸ್ಕಾರಶೂನ್ಯರಾದ ಪ್ರಾಕೃತರಾದ ಭವಿಗಳಿಂದ ಕಳುಹಲ್ಪಟ್ಟ ವಸ್ತುವು ಉದರವನ್ನು ಸೇರಿದ್ದರೂ ಹೊರಪಡಿಸಬೇಕು. ಎಂಬಲ್ಲಿ ಸಾಕ್ಷಿಯು.—

"ಸ್ವಮಾರ್ಗಾಚಾರ ವಿಮುಖೈಃ ಭವಿಭಿಃ ಪ್ರಾಕೃತಾತ್ಮಭಿಃ ||
ಪ್ರೇಷಿತಂ ಸಕಲಂ ದ್ರವ್ಯಮಾತ್ಮಲೀನಮಪಿ ತ್ಯಜೇತ್"

ವೀರಶೈವಾಚಾರ ವ್ರತವುಳ್ಳ ಶಿವಭಕ್ತನು—ವಿಷ್ಣ್ವಾದಿ ದೇವತೆಗಳಂ ಪೂಜಿಸಲಾಗದು, ಸ್ತುತಿಸಲಾಗದು, ಧ್ಯಾನಿಸಲಾಗದು, ತದರ್ಪಿತವಾದ ಅನ್ನಾದಿ ದ್ರವ್ಯಗಳಂ ಸ್ವೀಕರಿಸಲಾಗದು. ಎಂಬಲ್ಲಿ ಸಾಕ್ಷಿಯು.—

"ನಾರ್ಚಯೇದನ್ಯದೇವಾಂಸ್ತು ನ ಸ್ಮರೇನ್ನ ಚ ಕೀರ್ತಯೇತ್ ||
ನ ತನ್ನಿವೇದ್ಯಮಶ್ನೀಯಾಚ್ಛಿವಭಕ್ತೋ ದೃಢವ್ರತಃ"

ಯಾವನ ಮನೆಯಲ್ಲಿ ವಿಷ್ಣ್ವಾದ್ಯನ್ಯದೇವತೆಗಳಿರುತ್ತವೆಯೋ ಆ ಮನೆಗಳಂ ಪುಗಲಾಗದು. ಶಿವಪೂಜೆಯಂ ಮಾಡುವ ಸಮಯದಲ್ಲಿ ಶಿವೇತರಗಳಾದ ವಿಷ್ಣ್ವಾದಿ ದೇವತೆಗಳಂ ಪೂಜಿಸತಕ್ಕವರನ್ನು ನೋಡಲಾಗದು. ಎಂಬಲ್ಲಿ ಸಾಕ್ಷಿಯು.—

"ಯದ್ಗೃಹೇಷ್ವನ್ಯದೇವೋಸ್ತಿ ತದ್ಗೃಹಾಣಿ ಪರಿತ್ಯಜೇತ್ ||
ನಾನ್ಯದೇವಾರ್ಚಕಾನ್ಮರ್ತ್ಯಾನ್ಪೂಜಾಕಾಲೇ ನಿರೀಕ್ಷಯೇತ್"

ಯಾವಾಗಲೂ ಶಿವೈಕನಿಷ್ಠರೂ, ವೀರಶೈವಾಚಾರ ಮಾರ್ಗಾನುವರ್ತಿಗಳೂ ಆದ ಶಿವಭಕ್ತರಿಗೆ ಸ್ವಯಂವ್ಯಕ್ತ ಮೊದಲಾದ ಸ್ಥಾವರಲಿಙ್ಗಗಳ ತೀರ್ಥಪ್ರಸಾದಗಳು ಸಲ್ಲಲಾರವು. ಎಂಬಲ್ಲಿ ಸಾಕ್ಷಿಯು.—

" ಸದಾಶಿವೈಕನಿಷ್ಠಾನಾಂ ವೀರಶೈವಾಧ್ವವರ್ತಿನಾಮ್ ||
ನ ಹಿ ಸ್ಥಾವರಲಿಙ್ಗಾನಾಂ ನಿರ್ಮಾಲ್ಯ ಮುಪಯುಜ್ಯತೇ "

ಶಿವಭಕ್ತರಿಗೆ ಸ್ಥಾವರಲಿಙ್ಗಗಳ ತೀರ್ಥಪ್ರಸಾದಂಗಳು ಯೋಗ್ಯವಲ್ಲದಿರುವಲ್ಲಿ ಆ ಲಿಙ್ಗಗಳಿಗೆ ಅಪಾಯವು ಸಂಭವಿಸಿದರೆ ಉದಾಸೀನರಾಗಿರಬೇಕೆ ? ಎಂದರೆ— ಯಾವ ಸ್ಥಳಗಳಲ್ಲಿ ಸ್ಥಾವರಲಿಙ್ಗಗಳಿಗೆ ಅಪಾಯವುಂಟಾದರೂ, ಉಕ್ತ ನವವಿಧ ಭಕ್ತಿ ಸಮ್ಪನ್ನರಾದ ಶಿವಭಕ್ತರಿಗೆ ಮತ್ತೂ ಶಿವಚಿಹ್ನಧಾರಿಗಳಿಗೆ ವಿಪತ್ತು ಸಂಭವಿಸಿದಾಗ್ಯೂ, ಆ ಸಮಯದಲ್ಲಿ, ಪಾರ್ವತೀದೇವಿಯಿಂದಾಚರಿಸಲ್ಪಟ್ಟದಾದ ಆಚಾರದಿಂ ಪ್ರಾಣಗಳನ್ನಾದರೂ ಬಿಟ್ಟು, ಪರಿಹರಿಸಬೇಕು. ಶಿವಾರ್ಥಮಾಗಿ ಪ್ರಾಣತ್ಯಾಗ ಮಾಡಿಕೊಂಡವರು ದುರ್ಮರಣದೋಷಪಾತ್ರರಾಗುವುದಿಲ್ಲವು. ಕಿಂತು ಶಿವಸಾಯುಜ್ಯವನ್ನೇ ಹೊಂದುವರು. ಎಂಬಲ್ಲಿ ಸಾಕ್ಷಿಯು.—

" ಯತ್ರ ಸ್ಥಾವರಲಿಙ್ಗಾನಾಮಪಾಯಃ ಪರಿವರ್ತತೇ ||
ಅಥವಾ ಶಿವಭಕ್ತಾನಾಂ ಶಿವಲಾಞ್ಛನಧಾರಿಣಾಮ್ ||
ತತ್ರ ಪ್ರಾಣಾನ್ವಿಹಾಯಾಪಿ ಪರಿಹಾರಂ ಸಮಾಚರೇತ್ ||
ಶಿವಾರ್ಥಂ ಮುಕ್ತಜೀವಶ್ಚೇಚ್ಛಿವಸಾಯುಜ್ಯಮಾಪ್ನುಯಾತ್ "

ಶಿವನಂ ನಿನ್ದಿಸತಕ್ಕವರಂ ಕಂಡರೆ ಶಿಕ್ಷಿಸಬೇಕು, ಅಥವಾ ಶಪಿಸಬೇಕು. ಶಿಕ್ಷಿಸುವುದಕ್ಕೂ ಶಪಿಸುವುದಕ್ಕೂ ಅಶಕ್ತನಾದರೆ, ಆ ಸ್ಥಾನವಂ ಬಿಟ್ಟು, ಪೋಪುದು, ಎಂಬಲ್ಲಿ ಸಾಕ್ಷಿಯು.—

" ಶಿವನಿನ್ದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ||
ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋ ಭವೇತ್ "

ಯಾವ ಸ್ಥಳದಲ್ಲಿ ವೀರಶೈವಾಚಾರನಿನ್ದೆಯುಂಟಾಗಿರುತ್ತದೆಯೋ ಆ ಸ್ಥಳದಲ್ಲಿ ಎಂದಿಗೂ ಪ್ರವೇಶಿಸಬಾರದು. ಯಾವ ಸ್ಥಳದಲ್ಲಿ ಶಿವನಿನ್ದೆಯುಂಟೋ ಆ ಸ್ಥಳವನ್ನು ಸರ್ವಪ್ರಯತ್ನದಿಂದಲೂ ಬಿಡಬೇಕು. ಎಂಬಲ್ಲಿ ಸಾಕ್ಷಿಯು.—

" ಯತ್ರ ಚಾಚಾರನಿನ್ದಾಸ್ತಿ ಕದಾಚಿತ್ತತ್ರ ನ ವ್ರಜೇತ್ ||
ಯದ್ಗೃಹೇ ಶಿವನಿನ್ದಾಸ್ತಿ ತದ್ಗೃಹನ್ತು ಪರಿತ್ಯಜೇತ್ "

ಶಿವನಿಂದಕನಿಗೆ ಪ್ರಾಯಶ್ಚಿತ್ತಮುಂಟೋ ? ಇಲ್ಲವೋ ? ಎಂದರೆ "ಈಶ್ವರಸ್ಸರ್ವಭೂತಾನಾಂ " ಎಂದು ಶ್ರುತಿಯಿರುವುದರಿಂದ ಸರ್ವಪ್ರಾಣಿಗಳಿಗಧಿಪತಿಯಾದ

ಸರ್ವೇಶ್ವರನನ್ನು ನಿಂದಿಸತಕ್ಕವನಿಗೆ ಅನೇಕಕೋಟಿವರ್ಷಂಗಳಿಂದಲೂ ಪ್ರಾಯಶ್ಚಿತ್ತ ವಂ ಮಾಡಲು ಶಕ್ಯವಲ್ಲವು. ಎಂಬಲ್ಲಿ ಸಾಕ್ಷಿಯು.—

" ಯಸ್ಸರ್ವಭೂತಾಧಿಪತಿಂ ವಿಶ್ವೇಶಾನಂ ವಿನಿನ್ದತಿ ||
ನ ತಸ್ಯ ನಿಷ್ಕೃತಿಶ್ಶಕ್ಯಾ ಕರ್ತ್ತುಂ ವರ್ಷಶತೈರಪಿ "

ಈ ಪ್ರಕಾರವಾಗಿ ಶಿವಭಕ್ತನಿಗೆ ಶಿವೇತರದೇವತಾಪೂಜಾಸ್ಮರಣಾದಿಗಳು ಯೋಗ್ಯವಲ್ಲವೆಂದು ಹೇಳುವುದಾದರೆ ಸೂರ್ಯಾದ್ಯನ್ಯದೇವತೋಪಾಸನಾರೂಪವಾದ ಸನ್ಧ್ಯಾವನ್ದನಾದಿ ಪೂರ್ವಕರ್ಮಕ್ಕೆ ಏನು ಗತಿಯೆಂದರೆ, ಲಿಙ್ಗಧಾರಿಯಾಗಿ ಆಲಿಙ್ಗವಂ ಪೂಜಿಸುವುದರಲ್ಲಿಯೇ ನಿಷ್ಠೆಯುಳ್ಳ ಶಿವಭಕ್ತನು ಪೂರ್ವಕರ್ಮಗಳನ್ನು ಬಿಡಬೇಕು. ಅವುಗಳನ್ನಾಚರಿಸಿದರೆ, ಆತನು ಮಾಡುವ ಲಿಙ್ಗಪೂಜೆಯು ವ್ಯರ್ಥವಾಗುವುದು. ಎಂಬಲ್ಲಿ ಸಾಕ್ಷಿಯು.—

" ಶಿವಪೂಜಾಪರೋ ಭೂತ್ವಾ ಪೂರ್ವಕರ್ಮ ವಿವರ್ಜಯೇತ್ ||
ಅಥವಾ ಪೂರ್ವಕರ್ಮ ಸ್ಯಾತ್ಸಾ ಪೂಜಾ ನಿಷ್ಫಲಾ ಭವೇತ್ "

ಮತ್ತಂ, " ಗುರುಸಂಸ್ಕೃತಭಾವಸ್ಸನ್ಗುರುನಿರ್ಮಿತದೇಹವಾನ್ || ವಿಸ್ಮೃತ್ಯ ಪೂರ್ವದುರ್ಭಾವಂ ತದಧೀನಸ್ಸಮಾಚರೇತ್ " ಎಂಬ ಯೋಗಜಾಗಮವಚನಪ್ರಮಾಣವಿರುವುದರಿಂದ, ಯಾವಾಗಲೂ ಇಷ್ಟಲಿಙ್ಗದಲ್ಲಿಯೇ ನಿಷ್ಠೆಯುಳ್ಳ ವೀರಮಾಹೇಶ್ವರನು—ತನ್ನ ಸಮಯಾಚಾರಕ್ಕೆ ವಿರೋಧವಾದ ಪೂರ್ವಾಶ್ರಯಗತವಾದ ಸೂರ್ಯಾದ್ಯನ್ಯದೇವತೋಪಾಸನಾರೂಪವಾದ ಸನ್ಧ್ಯಾವನ್ದನಾದಿ ಪ್ರಾಕೃತಧರ್ಮಗಳನ್ನು ಬಿಡಬೇಕು. ಎಂಬಲ್ಲಿ ಸಾಕ್ಷಿಯು.—

" ಲಿಂಗೈಕನಿಷ್ಠಹೃದಯಸ್ಸದಾ ಮಾಹೇಶ್ವರೋ ಜನಃ ||
ಪೂರ್ವಾಶ್ರಯಗತಾನ್ಧರ್ಮಾನ್ ತ್ಯಜೇತ್ಸ್ವಾಚಾರರೋಧಕಾನ್ "

ಪೂರ್ವಾಶ್ರಯಪ್ರಾಪ್ತವಾದ ನಿತ್ಯನೈಮಿತ್ತಿಕಕರ್ಮಗಳಂ ಬಿಟ್ಟರೆ ಪಾಪಶ್ರವಣಮುಂಟಾಗಿರುವುದರಿಂದ, ಆ ಕರ್ಮಗಳನ್ನು ಬಿಡತಕ್ಕದು ಹೇಗೆಂದರೆ, ಪೂರ್ವೋಕ್ತದೀಕ್ಷಾರೂಪವಾದ ಶಿವಸಂಸ್ಕಾರ ಸಂಬಂಧದಿಂದುಂಟಾದ ಲಿಂಗನಿಷ್ಠೆಯಿಂದ ಹೋಗಲ್ಪಟ್ಟ ಸಂಚಿತಾಗಾಮಿರೂಪವಾದ ಸಕಲದೋಷವುಳ್ಳವರಾದ್ದರಿಂದ ನಿರ್ಮಲರಾದ, ಶಿವಭಕ್ತರಿಗೆ-ಪೂರ್ವಾಶ್ರಯಪ್ರಾಪ್ತ ನಿತ್ಯನೈಮಿತ್ತಿಕಾದಿಪ್ರಾಕೃತ ಕರ್ಮಗಳಿಂದೇನು ಪ್ರಯೋಜನವು ? ಪ್ರತ್ಯವಾಯನಿವೃತ್ತಿಯೇ ಪ್ರಯೋಜನವು, ಎಂದರೆ, ಹಾಗಲ್ಲವು, " ನೇಹಾಭಿಕ್ರಮನಾಶೋಸ್ತಿ ಪ್ರತ್ಯವಾಯೋ ನ ವಿದ್ಯತೇ || ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ " ಎಂದು ಭಗವದ್ವಚನವಿ

ರುವುದರಿಂದ, ಈ ವಚನಾರ್ಥವೇನೆಂದರೆ, “ ಇಹ ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಮ್ ” ಎಂಬ ಶ್ರುತಿಯಿಂ ಸಿದ್ಧಮಾದ ವರ್ಣಾಶ್ರಮದಲ್ಲಿ ಅಭಿಕ್ರಮನಾಶ... ಆತ್ಮಾಭಿಮುಖೀಕರಣದಲ್ಲಿ ಪಟುವಾದ ಗುರುಕಾರುಣ್ಯದಿಂ ಪ್ರಾಪ್ತಮಾದ ಧಾರಣಾದ್ಯಾಚಾರಕ್ರಮಕ್ಕೆ ನಾಶವಿಲ್ಲವೆಂದರ್ಥವು, ವಿಸ್ಮೃತಿಯಂ ಬಿಟ್ಟು, ತನ್ನ... ನಿಷ್ಠೆಯಿಂದ ಸದಾ ವಿಧೀಯಮಾನವಾದದ್ದರಿಂದ ಇದಕ್ಕೆ ವಿಚ್ಛೇದವಿಲ್ಲವೆಂಬ... ಭಾವವು. ಹೀಗಾದರೆ, ನಿತ್ಯನೈಮಿತ್ತಿಕಕರ್ಮತ್ಯಾಗದಿಂ ಪ್ರತ್ಯವಾಯವಿಲ್ಲದಿರು... ಲಿಂಗಧಾರಣ ಸಂಪನ್ನನಾದ ಶಿವಭಕ್ತನಿಗೆ ತನ್ನ ಸಮಯಾಚಾರಕ್ಕೆ ವಿರೋಧವಾ... ಪೂರ್ವಾಶ್ರಯಪ್ರಾಪ್ತವಾದ ಪ್ರಾಕೃತಕರ್ಮಗಳನ್ನು ಪರಿತ್ಯಾಗಮಾಡುವುದರಿಂ ಪ್ರತ್ಯವಾಯವಿಲ್ಲವೆಂಬುದು ಸತ್ಯವಾದದ್ದು.—

ಪೂರ್ವಕರ್ಮವು ಬಿಡಲ್ತಕ್ಕುದಾದರೆ ಜಾತಾಶೌಚಾದಿಗಳಿಗೇನು ಗತಿ... ದೊಡೆ, ಪ್ರಾಣಲಿಙ್ಗಸಙ್ಗಿಯಾದ ಶಿವಭಕ್ತನಿಗೆ—ಜಾತಾಶೌಚ ಮೃತಾ... ಚಂಗಳು ನಿಜವಾಗಿಯೂ ಇಲ್ಲವೆಂಬಲ್ಲಿ ಸಾಕ್ಷಿಯು.—

“ ನ ತಸ್ಯ ಸೂತಕಂ ಕಿಞ್ಚಿತ್ಪ್ರಾಣಲಿಙ್ಗಸಙ್ಗಿನಃ ||
ಜನನೋತ್ಥಂ ಮೃತೋತ್ಥಂ ಚ ವಿದ್ಯತೇ ಪರಮಾರ್ಥತಃ ”

ಸ್ತ್ರೀಯರಿಗೆ ರಜಸ್ಸೂತಕವಿಲ್ಲವೋ ? ಎಂದರೆ, ಪ್ರಾಣವಿರುವವರಿಗೂ ಲಿ... ವಂಧಾರಣೆಮಾಡಿಕೊಂಡು, ನಿತ್ಯದಲ್ಲೂ ತ್ರಿಕಾಲದಲ್ಲೂ ಆ ಲಿಂಗವಂ ವಿಧ್ಯನುಸ... ವಾಗಿ ಪೂಜಿಸಬೇಕಾದುದೇ ನಿತ್ಯವ್ರತವಾಗುಳ್ಳ ಶಿವಭಕ್ತಸ್ತ್ರೀಯಳಿಗೆ ಆ ವ್ರತನಿ... ವಿಷಯದಲ್ಲಿ ರಜಸ್ಸೂತಕವಿಲ್ಲವು. ಹಾಗೆಯೇ ಪ್ರಸೂತೆಯಾದ ಶಿವಭಕ್ತಸ್ತ್ರೀ... ತಶ್ಸೂತಕವಿಲ್ಲವು. ಎಂಬಲ್ಲಿ ಸಾಕ್ಷಿಯು.—

“ ಲಿಙ್ಗಾರ್ಚನರತಾಯಾಶ್ಚ ಋತೌ ನಾರ್ಯಾ ನ ಸೂತಕಮ್ ||
ತಥಾಪ್ರಸೂತಿಕಾಯಾಶ್ಚ ಸೂತಕಂ ನೈವ ವಿದ್ಯತೇ ”

ಮತ್ತಂ, ಯಾವಗೃಹದಲ್ಲಿ ಸ್ತ್ರೀಯು ಪ್ರಸೂತೆಯಹಳೋ, ಅಲ್ಲಿ ಸೂ... ದೋಷವಿಲ್ಲವು. ಶಿವಪಾದೋದಕ ಸಂಸ್ಪರ್ಶದ ದೆಸೆಯಿಂ ಸರ್ವಪಾಪವು ಹೋ... ವುದು. ಎಂಬಲ್ಲಿ ಸಾಕ್ಷಿಯು.—

“ ಗೃಹೇ ಯಸ್ಮಿನ್ಪ್ರಸೂತಾ ಸ್ತ್ರೀಸೂತಕಂ ನಾತ್ರವಿದ್ಯತೇ ||
ಶಿವಪಾದಾಮ್ಬುಸಂಸ್ಪರ್ಶಾತ್ಸರ್ವಪಾಪಂ ಪ್ರಣಶ್ಯತಿ ”

ಮತ್ತಂ, ಹ್ಯಾಗೆ ಸೂರ್ಯನೂ, ಅಗ್ನಿಯೂ, ವಾಯುವೂ ಶುಚಿಯೋ, ಹಾ... ಲಿಙ್ಗಾರ್ಚನಾಸಕ್ತಳಾದ ಸ್ತ್ರೀಯು—ಪ್ರಸವಿಸಿದಾಗ್ಯೂ, ರಜಸ್ವಲೆಯಾದಾಗ... ಪರಿಶುದ್ಧಳು. ಎಂಬಲ್ಲಿ ಸಾಕ್ಷಿಯು.—

" ಲಿಙ್ಗಾರ್ಚನರತಾ ನಾರೀ ಸೂತಕೀ ತು ರಜಸ್ವಲಾ ||
ರವಿರಗ್ನಿರ್ಯಥಾ ವಾಯುಸ್ತದ್ವತ್ಕೋಟಿಗುಣಶ್ಶುಚಿಃ "

ಈ ಪ್ರಕಾರಮಾದ ಶಿವಭಕ್ತರಿಂ ಶಿವಕ್ಷೇತ್ರ ತೀರ್ಥಯಾತ್ರಾದಿಗಳೂ ಬಿಡಲ್ಪಡತಕ್ಕವುಗಳೋ ಎಂದರೆ, ಇಷ್ಟಲಿಂಗ ಪೂಜಕನಾದ ಶಿವಭಕ್ತನು—ಶ್ರೇಷ್ಠವಾದ ಶ್ರೀಶೈಲಾದಿಕ್ಷೇತ್ರಂಗಳನ್ನೂ, ತ್ರಿಮುಕೂಟ ಮೊದಲಾದ ತೀರ್ಥಗಳನ್ನೂ, ಶಿವಯಾತ್ರೋತ್ಸವವನ್ನೂ ಯಾವಾಗಲೂ ಸಂತೋಷದಿಂ ಸೇವಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಶಿವಸ್ಥಾನಾನಿ ತೀರ್ಥಾನಿ ವಿಶಿಷ್ಟಾನಿ ಶಿವಾರ್ಚಕಃ ||
ಶಿವಯಾತ್ರೋತ್ಸವಂ ನಿತ್ಯಂ ಸೇವೇತ ಪರಯಾ ಮುದಾ "

ಮತ್ತಂ, ಶಿವಕ್ಷೇತ್ರೋತ್ಸವ ಮಹಾಯಾತ್ರೆಯಂ ಬಯಸುವ ಜನರಿಗೆ ಶಿವಭಕ್ತನು—ಮಾರ್ಗದಲ್ಲಿ ಅನ್ನೋದಕಂಗಳನ್ನು ಕೊಡಬೇಕು. ಎಂಬಲ್ಲಿ ಸಾಕ್ಷಿಯು-

" ಶಿವಕ್ಷೇತ್ರೋತ್ಸವಮಹಾಯಾತ್ರಾದರ್ಶನಕಾಂಕ್ಷಿಣಾಮ್ ||
ಮಾರ್ಗೇಽನ್ನಪಾನದಾನಞ್ಚ ಕುರ್ಯಾನ್ಮಾಹೇಶ್ವರೋ ಜನಃ "

ವಸ್ತ್ರಾದಿದಾನಂಗಳಂ ಬಿಟ್ಟು; ಅನ್ನೋದಕದಾನವು ಯಾವಕಾರಣದಿಂ ಹೇಳಲ್ಪಟ್ಟಿತೆಂದರೆ, ಅನ್ನೋದಕದಾನಕ್ಕೆ ಸಮಾನವಾದ ಅಧಿಕವಾದ ದಾನವಿಲ್ಲವು, ಪ್ರಾಣಿಗಳಂ ಕೊಲ್ಲದಿರುವುದಕ್ಕೂ ಕೊಲ್ಲಿಸದಿರುವುದಕ್ಕೂ ಸಮಾನವಾದ ತಪಸ್ಸಿಲ್ಲವು, ಆ ಕಾರಣದಿಂ ಶಿವಭಕ್ತನು ಪ್ರಾಣಧಾರಣಾತ್ಯಂತ್ರ ಸಾಧಕಮಾದ ಅನ್ನೋದಕದಾನದಲ್ಲಿ ನಿರತನಾಗಿರಬೇಕು. ಎಂಬಲ್ಲಿ ಸಾಕ್ಷಿಯು.—

" ನಾನ್ನತೋಯಸಮಂ ದಾನಂ ನ ಚಾಹಿಂಸಾ ಪರಂ ತಪಃ ||
ತಸ್ಮಾನ್ಮಾಹೇಶ್ವರೋ ನಿತ್ಯಮನ್ನತೋಯಪ್ರದೋಭವೇತ್ "

ಕನ್ಯಾದಾನವಂ ಯಾರಿಗಾದರೂ ಮಾಡಬಹುದೋ ? ಎಂದರೆ, ಯಾವಾಗಲೂ ವೀರಶೈವಮತಾಚಾರವ್ರತಮುಳ್ಳ ಶಿವಭಕ್ತನು— ವೀರಶೈವಮಾರ್ಗಾನುವರ್ತಿಗಳಾದ, ಸ್ವಜಾತೀಯರಾದ, ಶಿವಭಕ್ತರಿಗೋಸ್ಕರ, ತನ್ನ ಕುಲದಲ್ಲಿ ಹುಟ್ಟಿದ ಕನ್ಯೆಯನ್ನು ಕೊಡಬೇಕು. ಅಂತಹ ಶಿವಭಕ್ತರಿಂದಲೇ ಕನ್ಯೆಯಂ ತರಬೇಕು. ಎಂಬಲ್ಲಿ ಸಾಕ್ಷಿಯು.—

" ಸ್ವಮಾರ್ಗಾಚಾರವರ್ತಿಭ್ಯಸ್ಸ್ವಜಾತಿಭ್ಯಸ್ಸದಾ ವ್ರತೀ ||
ದದ್ಯಾತ್ತೇಭ್ಯಸ್ಸಮಾದದ್ಯಾತ್ಕನ್ಯಾಂ ಕುಲಸಮುದ್ಭವಾಮ್ "

ಯಾರಲ್ಲಿ ಊಟವಂ ಮಾಡಬೇಕೆಂದರೆ, ಯಾರು ಸ್ವಜಾತೀಯರೂ, ಸ್ವಮಾರ್ಗಾಚಾರನಿರತರೂ, ನಿಯತವಾದ ವ್ರತವುಳ್ಳವರೂ ಆಗಿರುತ್ತಾರೋ, ಅವರ ಮನೆ

ಗಳಲ್ಲಿಯೇ ಉಣಬೇಕು. ಯಾವಾಗಲೂ ಇತರರ ಮನೆಗಳಲ್ಲಿ ಉಣಬಾರದು. ಇ
ಲ್ಲಿ ಸಾಕ್ಷಿಯು.—

" ಸ್ವಮಾರ್ಗಾಚಾರ ನಿರತಾಸ್ಸಜಾತೀಯಾಶ್ಶಿವವ್ರತಾಃ ||
ತೇಷಾಂ ಗೃಹೇಷು ಭುಞ್ಜೀತ ನೇತರೇಷಾಂ ಕದಾಚನ "

ಇತಿ ಶ್ರೀಮತ್ಪರಶಿವಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾನ
ವೈಭವನಾದ, ನಿಖಿಲನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ
ಪ್ರಮಾಣಪಾರಾವಾರ ಪಾರೀಣನಾದ, ನಿರಾಭಾರ ವೀರಶೈವಸಾ
ಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾ
ರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್
ಷಟ್ಸ್ಥಲಪ್ರಕರಣದಲ್ಲಿ ಭಕ್ತಸ್ಥಲನಿರೂಪಣವು.



|| ಶ್ರೀಃ ||

ಶ್ರೀ ಜಗದ್ಗುರವೇ ಶಿವಾಯನಮಃ.

## ಮಾಹೇಶ್ವರಸ್ಥಲಮ್.



ಮಾಹೇಶ್ವರಸ್ಥಲ ಲಕ್ಷಣಕ್ರಮವದೆಂತೆನೆ.—

ಕೇವಲ ಸಹಜದಾನದಲ್ಲಿ ಕುಶಲನೂ, ಬ್ರಹ್ಮಾದಿಗಳ ಸ್ಥಾನಗಳಲ್ಲಿ ವಿಮು
ಖನೂ, ಆದ ಶಿವಭಕ್ತನು—ಶಿವನಲ್ಲಿಯೇ ನಿಷ್ಠೆಯುಳ್ಳವನಾಗಿದ್ದರೆ ಮಾಹೇಶ್ವರನೆ
ದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

" ಕೇವಲೇ ಸಹಜೇ ದಾನೇ ನಿಷ್ಣಾತಶ್ಶಿವತತ್ಪರಃ ||
ಬ್ರಹ್ಮಾದಿಸ್ಥಾನವಿಮುಖೋ ಭಕ್ತೋ ಮಾಹೇಶ್ವರಸ್ಸ್ಮೃತಃ "

ಯಾವುದು ಸಹಜದಾನವು? ಎಂದರೆ ಪ್ರತಿಗೃಹೀತೃ, ಪ್ರದಾತೃ, ದೇಯ
ಈ ಮೂರರಕ್ಕೂ ಶಿವಸ್ವರೂಪತ್ವವನ್ನೂ, ತನಗೆ ಅಕರ್ತೃತ್ವವನ್ನೂ ಚಿಂತಿಸುತ್ತಾ
ಯಾವುದು ಕೊಡಲ್ಪಡುವುದೋ, ಆ ದಾನವು ಸಹಜವೆಂದು ಹೇಳಿಸಿಕೊಳ್ಳುವುದು
ಎಂಬಲ್ಲಿ ಸಾಕ್ಷಿಯು.—

" ಆದಾತೃದಾತೃದೇಯಾನಾಂ ಶಿವಭಾವಂ ವಿಚಿನ್ತಯನ್ ||
ಆತ್ಮನೋಽಕರ್ತೃಭಾವಂ ಚ ಯದ್ದತ್ತಂ ಸಹಜಂ ಭವೇತ್ "

ಯಾರಿಗೋಸ್ಕರ ಕೊಡಲ್ಪಟ್ಟದ್ದು ಸಹಜದಾನವೆನೆ.—ಇಷ್ಟಲಿಂಗಾತಿರಿಕ್ತ ಮಾದ ಸ್ಥಾವರಲಿಂಗಗಳಿಗೋಸ್ಕರವಾಗಿಯೂ, ಶಿವಭಕ್ತರಿಗೋಸ್ಕರವಾಗಿಯೂ, ಕೊಡಲ್ಪಟ್ಟ ಕ್ಷೇತ್ರಾದಿ ದಾನವು ಸಹಜದಾನವೆಂದೆನಿಸಿಕೊಳ್ಳುವುದು. ಎಂಬಲ್ಲಿ ಸಾಕ್ಷಿಯು.—

" ಶಿವಾಯ ಶಿವಭಕ್ತಾಯ ದೀಯತೇ ಯದಿ ಕಿಂಚನ ||
ಭಕ್ತ್ಯಾ ತದಪಿ ವಿಖ್ಯಾತಂ ಸಹಜಂ ದಾನಮುತ್ತಮಮ್ "

ಸೋಪಾಧಿಕದಾನ, ನಿರುಪಾಧಿಕದಾನ, ಸಹಜದಾನ ಎಂಬೀ ಮೂರರಲ್ಲಿ ಸಹಜದಾನವೇ—ಪುರುಷನಿಗೆ ಜನನ ಮರಣ ರೂಪಮಾದ ಭವರೋಗಮಂ ನಿವಾರಿಸುವ ಶಿವತಾದಾತ್ಮ್ಯಜ್ಞಾನವಂ ಕೊಡುವುದರಿಂದ ಸರ್ವದಾನಶ್ರೇಷ್ಠವಾಗಿರುತ್ತದೆ. ಎಂಬಲ್ಲಿ ಸಾಕ್ಷಿಯು.—

" ಸಹಜಂ ದಾನಮುತ್ಕೃಷ್ಟಂ ಸರ್ವದಾನೋತ್ತಮೋತ್ತಮಮ್ ||
ಶಿವಜ್ಞಾನಪ್ರದಂ ಪುಂಸಾಂ ಜನ್ಮರೋಗನಿವರ್ತಕಮ್ "

ಸಹಜದಾನವಿಚಾರವದಂತಿರಲಿ, ಪ್ರಕೃತವಿಷಯವನ್ನನುಸರಿಸೋಣ.

ವೈಷಯಿಕ ಸುಖದಲ್ಲಿ ಅಭಿಲಾಷೆಯಿಲ್ಲದಿರುವುದರ ಮಹತ್ತ್ವದತ್ತಣಿಂ ಶಿವಭಕ್ತಿಗೆ ಯಾವಾಗ ಉದ್ರೇಕಮುಂಟಾಗುವುದೋ, ಆಗ ಸ್ಥಿರವಾದ ನಿತ್ಯಾನಿತ್ಯ ವಿವೇಕವಂ ಹೊಂದಿದ ಶಿವಭಕ್ತನು—ಮಾಹೇಶ್ವರನೆಂದು ಹೇಳಲ್ಪಡುವನು. ಎಂಬಲ್ಲಿ ಸಾಕ್ಷಿಯು.—

" ಭಕ್ತೇರ್ಯದಾಸಮುತ್ಕರ್ಷೋ ಭವೇದ್ವೈರಾಗ್ಯಗೌರವಾತ್ ||
ತದಾ ಮಾಹೇಶ್ವರಃ ಪ್ರೋಕ್ತೋ ಭಕ್ತಃ ಸ್ಥಿರವಿವೇಕವಾನ್ "

" ವಿಶ್ವಾಧಿಕೋ ರುದ್ರೋ ಮಹರ್ಷಿಃ | ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸ ನೋ ಬುದ್ಧ್ಯಾ ಶುಭಯಾ ಸ್ಮೃತ್ಯಾ ಸಂಯುನಕ್ತು " ಇತ್ಯಾದಿ ಶ್ರುತ್ಯನುಸಾರವಾಗಿ ಮಹೇಶ್ವರಪ್ರಶಂಸಾಪೂರ್ವಕಮಾಗಿ ಮಾಹೇಶ್ವರ ಸ್ವರೂಪಮಂ ನಿರೂಪಿಸುವೆನು ಅದೆಂತೆನೆ—

ಸಮಸ್ತದೇವದಾನವಾದಿ ವಿಶ್ವಕ್ಕನುಗ್ರಹಕರ್ತನಾದ " ಏಕಏವ ರುದ್ರೋ ನ ದ್ವಿತೀಯಾಯ ತಸ್ಥೇ " ಎಂಬ ಶ್ರುತಿಯುಂಟಾಗಿ ಅದ್ವಿತೀಯನೆಂದು ಪ್ರಸಿದ್ಧನಾದ ರುದ್ರನು—" ವಿಶ್ವಂ ನಾರಾಯಣಂ ಹರಿಂ " ಎಂಬ ಶ್ರುತಿಯುಂಟಾಗಿ ವಿಶ್ವರೂಪನೆಂದು ಪ್ರಸಿದ್ಧನಾದ ನಾರಾಯಣನಿಗಿಂತಲೂ ಶ್ರೇಷ್ಠನೆಂಬ ಬುದ್ಧಿಯು—ಯಾವನಿಗೆ ಸ್ಥಿರವಾಗಿಹುದೋ, ಆತಂ ಮಾಹೇಶ್ವರನು. ಎಂಬಲ್ಲಿ ಸಾಕ್ಷಿಯು.—

" ವಿಶ್ವಸ್ಮಾದಧಿಕೋ ರುದ್ರೋ ವಿಶ್ವಾನುಗ್ರಹಕಾರಕಃ ||
ಇತಿ ಯಸ್ಯ ಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಸ್ಸ್ಮೃತಃ "

" ನ ತತ್ಸಮಶ್ಚಾಪ್ಯಧಿಕಶ್ಚ ದೃಶ್ಯತೇ "—" ಬ್ರಹ್ಮ ವಿಷ್ಣು ರುದ್ರೇನ್ದ್ರಾಸ್ತೇ ಸಮ್ಪ್ರಸೂಯನ್ತೇ "—" ಕಾರಣನ್ತು ಧ್ಯೇಯಸ್ಸರ್ವೈಶ್ವರ್ಯಸಮ್ಪನ್ನ ಸ್ಸರ್ವೇಶ್ವರಶ್ಶಮ್ಭುರಾಕಾಶಮಧ್ಯೇ " ಎಂಬ ಶ್ರುತಿಗಳು ಶಿವನನ್ನು ಅಸಮಾನನನ್ನಾಗಿಯೂ, ಅಧಿಕನಿಲ್ಲದಿರತಕ್ಕವನನ್ನಾಗಿಯೂ, ಬ್ರಹ್ಮವಿಷ್ಣುರುದ್ರೇಂದ್ರಾದಿ ದೇವತೆಗಳಿಗೆ ಜನಕನನ್ನಾಗಿಯೂ, ದಹರಾಕಾಶದಲ್ಲಿ ಸರ್ವಧ್ಯೇಯನನ್ನಾಗಿಯೂ ಸಾರುತ್ತಿರುವುದರಿಂದ, ನಿರ್ಮಲನಾದ ಪರಮೇಶ್ವರನು—ಆಣವಾದಿ ಮಲತ್ರಯಯುಕ್ತರೂ, ಜನನಮರಣಪೀಡಿತರೂ ಆದ ಬ್ರಹ್ಮಾದಿಗಳೊಡನೆ ಸಮಾನನೆಂಬುವುದನ್ನು ಸಹಿಸದವನು ಮಾಹೇಶ್ವರನು. ಎಂಬಲ್ಲಿ ಸಾಕ್ಷಿಯು.—

" ಬ್ರಹ್ಮಾದ್ಯೈರ್ಮಲಿನಪ್ರಾಯೈರ್ನಿರ್ಮಲೇ ಪರಮೇಶ್ವರೇ ||
ಸಾಮ್ಯೋಕ್ತಿಂ ಯೋ ನ ಸಹತೇ ಸ ವೈ ಮಾಹೇಶ್ವರಾಭಿಧಃ "

ಮತ್ತಂ, " ಈಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್ " ಎಂಬ ಶ್ರುತಿಯುಂಟಾಗಿ, ಮತ್ತಂ " ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ || ಭ್ರಾಮಯಂತ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ || ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ " ಎಂಬ ಗೀತಾವಚನಮುಂಟಾಗಿ, ಬ್ರಹ್ಮನೇ ಮೊದಲಾದ ಸಕಲ ಪಶುಪ್ರಾಣಿಗಳಿಗೂ ಪ್ರೇರಕನಾದ ಪರಮೇಶ್ವರನೊಬ್ಬನೇ ಶ್ರೇಷ್ಠನೆಂಬ ಬುದ್ಧಿಯೋಗದದೆಸೆಯಿಂದ ಪರಮೇಶ್ವರನಲ್ಲಿಯೇ ಆಸಕ್ತನಾದ ಭಕ್ತನು ಮಾಹೇಶ್ವರನೆಂದು ತಿಳಿಯಲ್ಪಡತಕ್ಕವನು. ಎಂಬಲ್ಲಿ ಸಾಕ್ಷಿಯು.—

" ಈಶ್ವರಸ್ಸರ್ವಭೂತಾನಾಂ ಬ್ರಹ್ಮಾದೀನಾಂ ಮಹಾನಿತಿ ||
ಬುದ್ಧಿಯೋಗಾತ್ತದಾಸಕ್ತೋ ಭಕ್ತೋ ಮಾಹೇಶ್ವರಸ್ಸ್ಮೃತಃ "

ನಾಶದೊಡನೆ ಕೂಡಿದ ಬ್ರಹ್ಮವಿಷ್ಣ್ವಾದಿಗಳ ಸಂಪತ್ತುಗಳನ್ನು ತೃಣದೋಪಾದಿಯಲ್ಲಿ ತಿಳಿದವನೂ, ಶಬ್ದಸ್ಪರ್ಶಾದಿ ವಿಷಯಗಳಿಂದುಂಟಾದ ಸೋಪಾಧಿಕಸುಖಲೇಶದಲ್ಲೂ ನಿಸ್ಪೃಹನಾಗಿ, ನಿತ್ಯವಾದ ಶಿವಾನನ್ದದಲ್ಲೇ ಪ್ರೀತಿಯುಳ್ಳವನೂ ವೀರಮಾಹೇಶ್ವರನು. ಎಂಬಲ್ಲಿ ಸಾಕ್ಷಿಯು.—

" ಕ್ಷಯಾತಿಶಯಸಂಯುಕ್ತಾ ಬ್ರಹ್ಮವಿಷ್ಣ್ವಾದಿಸಮ್ಪದಃ ||
ತೃಣವನ್ಮನುತೇ ಯುಕ್ತ್ಯಾ ವೀರಮಾಹೇಶ್ವರಸ್ಸದಾ ||

ಶಬ್ದಸ್ಪರ್ಶಾದಿಸಮ್ಪನ್ನೇ ಸುಖಲೇಶೇ ತು ನಿಸ್ಪೃಹಃ ||
ಶಿವಾನನ್ದೇ ಸಮುತ್ಕಣ್ಠೋ ವೀರಮಾಹೇಶ್ವರೋ ಭವೇತ್ ''

ಮತ್ತಂ, ಅನ್ಯಸ್ತ್ರೀಸಂಗಶೂನ್ಯನೂ, ಪರದ್ರವ್ಯದಲ್ಲಿ ಪರಾಙ್ಮುಖನೂ, ಶಿವಾರ್ಥವಾದ ಕಾರ್ಯಂಗಳ ಆಧಿಕ್ಯವುಳ್ಳವನೂ, ಶಿವಾಗಮಗಳ ಅರ್ಥವಂ ಕೇಳುವುದರಲ್ಲಿ ನಿಷ್ಠೆಯುಳ್ಳವನೂ, ಶಿವಸ್ತೋತ್ರವೆಂಬ ರಸಾಯನವಂ ಸೇವಿಸುವುದರಿಂ ಸುಖವಿಶಿಷ್ಟವಾದ ಮನಸ್ಸುಳ್ಳವನೂ, ಪರಿಶುದ್ಧನೂ, ಶಿವಾಧಿಕ್ಯವಂ ಪ್ರತಿಪಾದಿಸುವ ಶ್ರುತ್ಯಾದಿ ಪ್ರಮಾಣಂಗಳನ್ನು ಸಂಪಾದಿಸುವುದರಲ್ಲಿ ಉದ್ಯೋಗವುಳ್ಳವನೂ, ನಾನು ನನ್ನದು ಎಂಬ ಅಹಂಕಾರ ಮಮಕಾರಗಳಿಲ್ಲದವನೂ, ನಿವಾರಿಸಲ್ಪಟ್ಟ ಅಜ್ಞಾನಾದಿ ಸಕಲ ಕ್ಲೇಶಸಮೂಹವುಳ್ಳವನೂ, ಮುಟ್ಟಲ್ಪಡದ ಮದವುಳ್ಳವನೂ, ಅನ್ಯಶುಭದ್ವೇಷದಿಂ ಬಿಡಲ್ಪಟ್ಟವನೂ, ನಿವಾರಿಸಲ್ಪಟ್ಟ ಕಾಮೋದ್ರೇಕವುಳ್ಳವನೂ, ಹಾರಿಸಲ್ಪಟ್ಟ ಕ್ರೋಧಬಾಧೆಯುಳ್ಳವನೂ, ಸರ್ವಕಾಲದಲ್ಲೂ ಸುಖಿಸುತ್ತಿರುವ ಚಿತ್ತವುಳ್ಳವನೂ, ಸಕಲ ಪ್ರಾಣಿಗಳಿಗೂ ಹಿತವನ್ನುಂಟುಮಾಡುವುದರಲ್ಲಿ ಆಸಕ್ತನೂ, ಶಿವಸಂಬಂಧವಾದ ಕಾರ್ಯಕ್ಕೆ ವಿರೋಧಿಗಳಾದವರನ್ನು ನಿವಾರಿಸುವ ಉದ್ಯೋಗವುಳ್ಳವನೂ, ಶಿವೋತ್ಕರ್ಷವಂ ಹೇಳುವವರೊಡನೆ ಯಾವಾಗಲೂ ಸಂಚರಿಸತಕ್ಕವನೂ, ಶಿವನಿಂದೆಯು ಪ್ರಾಪ್ತವಾದಲ್ಲಿ ತನ್ನ ಪ್ರಾಣವಂ ಬಿಡುವುದಕ್ಕೆ ಶಂಕಿಸದವನೂ, ಶಿವಲಿಂಗದಲ್ಲಿಯೇ ನಿಷ್ಠೆಯುಳ್ಳವನೂ, ಶಿವಭಾವವುಳ್ಳವನೂ, ಆದವನು ವೀರಮಾಹೇಶ್ವರನೆಂದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

'' ಪರಸ್ತ್ರೀಸಙ್ಗನಿರ್ಮುಕ್ತಃ ಪರದ್ರವ್ಯಪರಾಙ್ಮುಖಃ ||
ಶಿವಾರ್ಥಕಾರ್ಯಸಮ್ಪನ್ನಃ ಶಿವಾಗಮಪರಾಯಣಃ ||
ಶಿವಸ್ತುತಿರಸಾಸ್ವಾದ ಮೋದಮಾನಮನಾಶ್ಶುಚಿಃ ||
ಶಿವೋತ್ಕರ್ಷಪ್ರಮಾಣಾನಾಂ ಸಮ್ಪಾದನಸಮುದ್ಯತಃ ||
ನಿರ್ಮಮೋ ನಿರಹಙ್ಕಾರೋ ನಿರಸ್ತಕ್ಲೇಶಪಞ್ಜರಃ ||
ಅಸ್ಪೃಷ್ಟಮದಸಮ್ಬನ್ಧೋ ಮಾತ್ಸರ್ಯಾವೇಶವರ್ಜಿತಃ ||
ನಿರಸ್ತಮದನೋನ್ಮೇಷೋ ನಿರ್ಧೂತಕ್ರೋಧವಿಪ್ಲವಃ ||
ಸದಾ ಸನ್ತುಷ್ಟಹೃದಯಃ ಸರ್ವಪ್ರಾಣಿಹಿತೇರತಃ ||
ನಿವಾರಣಸಮುದ್ಯೋಗೀ ಶಿವಕಾರ್ಯವಿರೋಧಿನಾಮ್ ||
ಸಹಚಾರೀ ಸದಾಕಾಲಂ ಶಿವೋತ್ಕರ್ಷಾಭಿಧಾಯಿಭಿಃ ||
ಶಿವಾಪಕರ್ಷೇ ಸಮ್ಪ್ರಾಪ್ತೇ ಪ್ರಾಣತ್ಯಾಗೇಪ್ಯಶಙ್ಕಿತಃ ||
ಶಿವೈಕನಿಷ್ಠಶ್ಶಿವಾತ್ಮಾ ವೀರಮಾಹೇಶ್ವರೋಭವೇತ್ ''

ಇತಿ ಶ್ರೀಮತ್ಪರಶಿವ ಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾ
ಸವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ
ಪ್ರಮಾಣ ಪಾರಾವಾರ ಪಾರೀಣನಾದ, ನಿರಾಭಾರ ವೀರಶೈವ
ಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾ
ಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿ
ಯೊಳ್ ಷಟ್ಸ್ಥಲಪ್ರಕರಣದಲ್ಲಿ
ಮಾಹೇಶ್ವರಸ್ಥಲನಿರೂಪಣಮ್.



॥ ಶ್ರೀಃ ॥

ಸರ್ವವಿದ್ಯಾಧಿಪತಯೇಶಿವಾಯನಮಃ.

# ಪ್ರಸಾದಿಸ್ಥಲಮ್.



ಪ್ರಸಾದಿಸ್ಥಲ ಲಕ್ಷಣಕ್ರಮವದೆಂತೆನೆ.—

"ಶಿವ ಏಕೋ ಧ್ಯೇಯಶ್ಶಿವಙ್ಕರಸ್ಸರ್ವಮನ್ಯತ್ಪರಿತ್ಯಜ್ಯ" ಎಂಬ ಶ್ರುತಿಯುಂಟಾಗಿ, ಶಿವನಲ್ಲಿ ಹೊರತು ಬೇರೆ ದೇವರಲ್ಲಿ ಪ್ರೀತಿ ಲೇಶವೂ ಇಲ್ಲದವನಾಗಿ, ತನ್ನಿಷ್ಟಲಿಂಗದಲ್ಲಿ ನಿಯಮಿಸಲ್ಪಟ್ಟ ಅನ್ತಃಕರಣವುಳ್ಳ ಈ ಮಾಹೇಶ್ವರನು—ಈ ವಿಶ್ವವನೆಲ್ಲಂ ಶಿವಮಯವನ್ನಾಗಿ ತಿಳಿದವನಾದಕಾರಣದಿಂ ಪ್ರಸಾದಿಯಾಗುತ್ತಿಹನು. ಎಂಬಲ್ಲಿ ಸಾಕ್ಷಿಯು.—

"ಅನ್ಯತ್ರ ಶಮ್ಭೋರ್ರತಿಮಾತ್ರಶೂನ್ಯೇ
ನಿಜೇಷ್ಟಲಿಂಗೇ ನಿಯತಾನ್ತರಾತ್ಮಾ ॥
ಶಿವಾತ್ಮಕಂ ವಿಶ್ವಮಿದಂ ವಿಬುದ್ಧ್ಯನ್
ಮಾಹೇಶ್ವರೋಸೌ ಭವತಿ ಪ್ರಸಾದೀ"

ಲಿಂಗನಿಷ್ಠಾದಿ ಸ್ಥಳೋಕ್ತಜ್ಞಾನಾಚರಣೆಗಳಿಂದ ಕೊಲ್ಲಲ್ಪಟ್ಟ ಪಾಪಸಮೂಹವುಳ್ಳ ಈ ಮಾಹೇಶ್ವರನು—ಮನೋನೈರ್ಮಲ್ಯದ ಸಂಬಂಧದಿಂ ಪ್ರಸಾದಿಯೆಂದು ಹೇಳಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

"ಲಿಙ್ಗನಿಷ್ಠಾದಿಭಾವೇನ ಧ್ವಸ್ತಪಾಪನಿಬನ್ಧನಃ ॥
ಮನಃಪ್ರಸಾದಯೋಗೇನ ಪ್ರಸಾದೀತ್ಯೇಷ ಕಥ್ಯತೇ"

[ಲಿಂಗನಿಷ್ಠಾದಿಗಳ ಸ್ವರೂಪವು ನಮ್ಮಿಂದ ರಚಿತವಾದ "ಷಟ್ಸ್ಥಲದೀಪಿಕೆ" ಎಂಬ ಗ್ರನ್ಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದರಿಂದ ಗ್ರನ್ಥಬಾಹುಳ್ಯಭೀತಿಯ ದೆಸೆಯಿಂದಿಲ್ಲಿ ನಿರೂಪಿಸಲ್ಪಡಲಿಲ್ಲವು.]

"ಚಿತ್ತಸ್ಯ ಹಿ ಪ್ರಸಾದೇನ ಹನ್ತಿ ಕರ್ಮ ಶುಭಾಶುಭಮ್ ‖ ಪ್ರಸನ್ನಾತ್ಮಾತ್ಮನಿ ಸ್ಥಿತ್ವಾ ಸುಖಮವ್ಯಯಮಶ್ನುತೇ" ಎಂದು ಶ್ರುತಿಯುಂಟಾಗಿ ಮನಸ್ಸಿನ ನಿರ್ಮಲತ್ವದ ಚಿಹ್ನೆಯು—ಪ್ರಸಾದವೆಂದು ಹೇಳಲ್ಪಡುತ್ತದೆ. ಈ ಮನೋನಿರ್ಮಲತ್ವರೂಪವಾದ ಪ್ರಸಾದವು—ಲಿಂಗರೂಪನಾದ ಶಿವನ ಪ್ರಸಾದದಿಂ ಸಿದ್ಧಿಸುವುದು. ಎಂಬಲ್ಲಿ ಸಾಕ್ಷಿಯು.—

"ನೈರ್ಮಲ್ಯಂ ಮನಸೋ ಲಿಙ್ಗಂ ಪ್ರಸಾದ ಇತಿ ಕಥ್ಯತೇ ‖
ಶಿವಸ್ಯ ಲಿಙ್ಗರೂಪಸ್ಯ ಪ್ರಸಾದಾದೇವ ಸಿದ್ಧ್ಯತಿ"

ಚಿತ್ತನೈರ್ಮಲ್ಯರೂಪವಾದ ಪ್ರಸಾದಕ್ಕೆ ಕಾರಣವಾದ ಶಿವಪ್ರಸಾದವಾವುದೆಂದರೆ, ಶಿವಲಿಂಗಮೂರ್ತಿಗೆ ಸಮರ್ಪಿಸಲ್ಪಟ್ಟ ದ್ರವ್ಯವಾವುದುಂಟೋ, ಅದು ಶಿವಪ್ರಸಾದವು. ಆ ನಿರ್ಮಾಲ್ಯವಾದರೋ ವೀರಶೈವರಿಗೆ ವಿಶೇಷವಾಗಿ ಮನೋನೈರ್ಮಲ್ಯಕ್ಕೆ ಕಾರಣವಾಗುತ್ತಿಹುದು. ಎಂಬಲ್ಲಿ ಸಾಕ್ಷಿಯು.—

"ಶಿವಪ್ರಸಾದೋ ಯದ್ದ್ರವ್ಯಂ ಶಿವಾಯ ವಿನಿವೇದಿತಮ್ ‖
ನಿರ್ಮಾಲ್ಯಂ ತತ್ತು ಶೈವಾನಾಂ ಮನೋನೈರ್ಮಲ್ಯಕಾರಣಮ್"

ನಿರ್ಮಲಜ್ಞಾನಕ್ಕೆ ಕಾರಣವಾದ ಶಿವಲಿಂಗಪ್ರಸಾದರೂಪವಾದ ನಿರ್ಮಾಲ್ಯವನ್ನು ಮನೋನೈರ್ಮಲ್ಯಸಿದ್ಧಿಗಾಗಿ ಅಂಗೀಕರಿಸಿದ ಈ ವೀರಮಾಹೇಶ್ವರನು—ಪ್ರಸಾದಿಯೆಂದು ಹೇಳಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

"ಮನಃಪ್ರಸಾದಸಿದ್ಧ್ಯರ್ಥಂ ನಿರ್ಮಲಜ್ಞಾನಕಾರಣಮ್ ‖
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ"

ಮತ್ತಂ, ಶಿವಲಿಂಗಕ್ಕೆ ಸಮರ್ಪಿಸಲ್ಪಟ್ಟ ಸಮಸ್ತ ದ್ರವ್ಯಗಳನ್ನು ಲೇಸಾಗಿ ಬುಂಜಿಸುತ್ತಾ, ಶಿವಲಿಂಗದಲ್ಲಿ ಅವಧಾನವುಳ್ಳವನಾಗಿ ಸಮರ್ಪಿಸಲ್ಪಡದಿದ್ದ ದ್ರವ್ಯಗಳ ಸೋಂಕಿಲ್ಲದವನಾಗಿ ಇದ್ದರೆ ಅವನೇ ಪ್ರಸಾದಿಸ್ಥಲವುಳ್ಳವನೆಂಬಲ್ಲಿ ಸಾಕ್ಷಿಯು.—

"ಲಿಙ್ಗಾರ್ಪಿತಪದಾರ್ಥಾಂಸ್ತು ಸುಭೋಗೀ ಲಿಂಗಲಹಿತಃ ‖
ಅನರ್ಪಿತವಿಸರ್ಜೀ ಚ ಪ್ರಸಾದಿಸ್ಥಲಮುತ್ತಮಮ್"

ಆ ಕಾರಣದಿಂ, "ಆಹಾರಶುದ್ಧ್ಯಾ ತತ್ವಶುದ್ಧಿಃ" ಎಂಬ ಶ್ರುತಿಯುಂಟಾಗಿ ಶಿವನಿರ್ಮಾಲ್ಯವಂ ಭಕ್ಷಿಸುವುದರಿಂ ಸಕಲ ತತ್ತ್ವಶುದ್ಧಿಯಾಗುವುದು, ತದ್ಭಾವ

ರಾ ಭಕ್ತನು ಮನೋನೈರ್ಮಲ್ಯವಂ ಪಡೆವನೆಂದು ಪೇಳುವೆನದೆಂತೆನೆ.— ಅನ್ನಶು ಯಿಂ ಸಕಲ ಪ್ರಾಣಿಗಳಿಗೂ ದೇಹಾಕ್ಷಭುವನ ಪ್ರಪಂಚಶುದ್ಧಿಯುಂಟಹುದೆಂ ಶಾಸ್ತ್ರಜ್ಞರಿಂ ಹೇಳಲ್ಪಡುವುದು. ಶಿವನಿಗೆ ಸಮರ್ಪಿಸುವುದರಿಂ ಯಾವ ಅನ್ನಸಮೂ ಹವು ಶುದ್ಧಮಾದದ್ದೋ, ಅದನ್ನು ಲಿಂಗನಿಷ್ಠೆಯುಳ್ಳವನಾಗಿ ಸರ್ವದಾ ಬುಂಜಿ ಶಕ್ಕ ಪ್ರಸಾದಿಯು—ಅಸದೃಶವಾದ ಶಿವಜ್ಞಾನಕ್ಕೆ ಕಾರಣಮಾದ ಮನೋನೈ ಲ್ಯವಂ ಪಡೆಯುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಅನ್ನಶುದ್ಧ್ಯಾ ಹಿ ಸರ್ವೇಷಾಂ ತತ್ವಶುದ್ಧಿರುದಾಹೃತಾ ||
ವಿಶುದ್ಧಮನ್ನಜಾತಂ ಹಿ ಯಚ್ಛಿವಾಯ ಸಮರ್ಪಿತಮ್ ||
ತದೇವ ಸಾರ್ವಕಾಲನ್ತು ಭುಞ್ಜಾನೋ ಲಿಙ್ಗತತ್ಪರಃ ||
ಮನಃಪ್ರಸಾದಮತುಲಂ ಲಭತೇ ಜ್ಞಾನಕಾರಣಮ್ "

ಆ ಕಾರಣದಿಂ, ಆತ್ಮಭೋಗಕ್ಕೋಸ್ಕರ ನಿಯತವಾಗಿ ಯಾವ ಯಾ ದ್ರವ್ಯವು ಪ್ರಾಪ್ತವಾಗುತ್ತಿಹುದೋ, ಅದನೆಲ್ಲಂ " ಯದ್ಯದಾತ್ಮಹಿತಂ ವಸ್ತು ತ ದ್ವಸ್ತು ಶಿವಾರ್ಪಿತಮ್ " ಎಂಬ ಶಿವರಹಸ್ಯವಚನಾನುಸಾರದಿಂ ಶಿವಲಿಂಗಕ್ಕರ್ಪಿ ಬುಂಜಿಸಬೇಕೆಂದರೆ, ತನ್ನ ಭೋಗಕ್ಕೋಸ್ಕರ ಕ್ಲುಪ್ತವಾಗಿ ಸಂಪಾದಿಸಲ್ಪಟ್ಟುದಾ ಯಾವ ಯಾವ ದ್ರವ್ಯವುಂಟೋ, ಅದನೆಲ್ಲಂ ಇಷ್ಟಲಿಂಗಮೂರ್ತಿಯಾದ ಶಿವನಿಗರ್ಪಿ ಮನಶ್ಶುದ್ಧಿಗಾಗಿ ಬುಂಜಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಆತ್ಮಭೋಗಾಯ ನಿಹಿತಂ ಯದ್ಯದ್ದ್ರವ್ಯಂ ಸಮಾಹಿತಮ್ ||
ತತ್ತತ್ಸಮರ್ಪ್ಯ ದೇವಾಯ ಭುಞ್ಜೀತಾತ್ಮವಿಶುದ್ಧಯೇ "

ಭವರೋಗಗಳಿಗೆ ವೈದ್ಯನೂ, ಲಿಂಗದಲ್ಲಿ ನಿರಂತರಸ್ಥಾಯಿಯೂ ಆದ ಮಹೇ ಶ್ವರನಿಂದ ಯಾವ ಯಾವ ದ್ರವ್ಯವು ಬುಂಜಿಸಿ ಪ್ರಸಾದವಾಗಿ ಮಾಡಲ್ಪಟ್ಟಿತೋ ಅದೆಲ್ಲವೂ ಸಂಸಾರವೆಂಬ ರೋಗವನ್ನು ತೊಲಗಿಸುವುದರಲ್ಲಿ ರಸಾಯನವಾದದ್ದು ಎಂಬಲ್ಲಿ ಸಾಕ್ಷಿಯು.—

" ನಿತ್ಯಸಿದ್ಧೇನ ದೇವೇನ ಭಿಷಜಾ ಜನ್ಮರೋಗಿಣಾಮ್ ||
ಯದ್ಯತ್ಪ್ರಸಾದಿತಂ ಭುಕ್ತ್ವಾ ತತ್ತು ಜನ್ಮರಸಾಯನಮ್ "

ಆ ಪ್ರಸಾದ ದ್ರವ್ಯವು ಪುರುಷನಿಗೆ ಆರೋಗ್ಯಕಾರಣಮಾದದ್ದೂ, ಚಿತ್ತಶು ದ್ಧಿಯನ್ನುಂಟುಮಾಡತಕ್ಕದ್ದೂ, ಆಧ್ಯಾತ್ಮಿಕಾದಿ ತಾಪತ್ರಯಗಳೆಂಬ ಮಹಾರೋ ಗಗಳಂ ನಾಶಮಾಡುವುದರಲ್ಲಿ ವೈದ್ಯನಾದದ್ದೂ, ವಿದ್ಯೆಯ ವಿಶೇಷಸಿದ್ಧಿಗೆ ಕಾರ ಮಾದದ್ದೂ, ಕ್ಷೇತ್ರ [illegible] ತಕ್ಕದ್ದೂ, ಶಿವಜ್ಞಾನದ ಆವಿರ್ಭಾ

ವಕ್ಕೆ ದ್ವಾರವಾದದ್ದೂ, ಅಜ್ಞಾನದ ವಿನಾಶಕ್ಕೆ ಹೇತುವಾದದ್ದೂ, ವೈರಾಗ್ಯದ ಸಂಪತ್ತಿಗೆ ಮೂಲಕಾರಣವಾದದ್ದೂ, ನಿತ್ಯಾನನ್ದವಂ ಪ್ರಕಾಶಪಡಿಸತಕ್ಕದ್ದೂ, ಪಾಪಿಗಳಿಗೆ ದುರ್ಲಭವಾದದ್ದೂ, ಪುಣ್ಯಾತ್ಮರಿಗೆ ಸುಲಭವಾದದ್ದೂ, ಬ್ರಹ್ಮವಿಷ್ಣ್ವಾದಿ ದೇವತೆಗಳಿಂದಲೂ, ವಸಿಷ್ಠಾದಿ ಮುನಿಗಳಿಂದಲೂ ಪ್ರೀತಿಸಲ್ಪಟ್ಟದ್ದೂ, ಭೋಗಮೋಕ್ಷಾರ್ಥಿಗಳಿಂ ಸ್ವೀಕರಿಸಲರ್ಹವಾದದ್ದೂ ಆಗಿರುತ್ತದೆ. ಎಂಬಲ್ಲಿ ಸಾಕ್ಷಿಯು.—

" ಆರೋಗ್ಯಕಾರಣಂ ಪುಂಸಾಮನ್ತಃಕರಣಶುದ್ಧಿದಮ್ ||
ತಾಪತ್ರಯಮಹಾರೋಗ ಸಮುದ್ಧರಣಭೇಷಜಮ್ ||
ವಿದ್ಯಾವಿಸಿದ್ಧಿಕರಣಂ ವಿನಿಪಾತವಿಘಾತನಮ್ ||
ದ್ವಾರಂ ಜ್ಞಾನಾವತಾರಸ್ಯ ಮೋಹೋಚ್ಛೇದಸ್ಯ ಕಾರಣಮ್ ||
ವೈರಾಗ್ಯಸಮ್ಪದೋ ಮೂಲಂ ಮಹಾನನ್ದಪ್ರವರ್ಧನಮ್ ||
ದುರ್ಲಭಂ ಪಾಪಚಿತ್ತಾನಾಂ ಸುಲಭಂ ಶುದ್ಧಕರ್ಮಣಾಮ್ ||
ಆದೃತಂ ಬ್ರಹ್ಮವಿಷ್ಣ್ವಾದ್ಯೈರ್ವಸಿಷ್ಠಾದ್ಯೈಶ್ಚ ತಾಪಸೈಃ ||
ಶಿವಸ್ವೀಕೃತಮನ್ನಾದ್ಯಂ ಸ್ವೀಕಾರ್ಯಂ ಸಿದ್ಧಿಕಾಙ್ಕ್ಷಿಭಿಃ "

ಪತ್ರ ಪುಷ್ಪ ಫಲ ಜಲ ಮೊದಲಾದ ಯಾವ ದ್ರವ್ಯವು ಶಿವನಿಗಾಗಿ ಸಮರ್ಪಿಸಲ್ಪಟ್ಟಿತೋ, ಅದನ್ನು ಸ್ವೀಕರಿಸುವುದರಿಂ ಸಕಲ ವಿಧವಾದ ಪಾಪವು ಕ್ಷಯವಂ ಹೊಂದುವುದೆಂಬಲ್ಲಿ ಸಾಕ್ಷಿಯು.—

" ಪತ್ರಂ ಪುಷ್ಪಂ ಫಲಂ ತೋಯಂ ಯಚ್ಛಿವಾಯ ನಿವೇದಿತಮ್ ||
ತತ್ತತ್ಸ್ವೀಕಾರಯೋಗೇನ ಸರ್ವಪಾಪಕ್ಷಯೋಭವೇತ್ "

ಇತಿ ಶ್ರೀಮತ್ಪರಶಿವಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲ
ಜ್ಞಾನವೈಭವನಾದ, ನಿಖಿಲನಿಗಮಾಗಮೇತಿಹಾಸಸ್ಮೃತಿ ಪುರಾಣ ಪದ
ವಾಕ್ಯಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವ
ಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾ
ಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊ
ಳ್ ಷಟ್ಸ್ಥಲಪ್ರಕರಣದಲ್ಲಿ ಪ್ರಸಾದಿಸ್ಥಲ
ನಿ ರೂ ಪ ಣ ಮ್ .



|| ಶ್ರೀಃ ||

ಶ್ರೀಕಣ್ಠಾಯ ನಮಃ.

# ಪ್ರಾಣಲಿಂಗಿಸ್ಥಲಮ್.



ಪ್ರಾಣಲಿಙ್ಗಸ್ಥಲ ಲಕ್ಷಣಕ್ರಮವದೆಂತೆನೆ:—

ಸ್ವರೂಪಹಾನಿವೃದ್ಧಿಗಳಿಲ್ಲದೆ ಸಜಾತೀಯಸಮರಸ ಶಿವಯೋಗವುಳ್ಳ ಶಿಷ್ಯ ಸಾದವು ಸಿದ್ಧವಾಗಲು, ಸಕಲ ಜಗತ್ತು ಶಿವಾಭಿನ್ನವಾಗಿ ತೋರುತ್ತದೆ, ಆ ಕಾ ಣದಿಂ ಶಿವಾಭೇದದಿಃ ಭಾವಿಸಲ್ಪಟ್ಟ ಸ್ವರೂಪವುಳ್ಳ ಆ ಪ್ರಸಾದಿಯು—ಸ್ವಕರ್ಮ ಬಿಡಲ್ಪಟ್ಟವನಾಗಿ, ಆ ಕರ್ಮವು—ಸ್ವಸ್ವರೂಪವೇ ಆಗಲಾಗಿ ಪ್ರಾಣಲಿಂಗಿ ಯ ಕೊಳ್ಳುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಶಿವಪ್ರಸಾದೇ ಸತಿ ಯೋಗಭಾಜಿ ಸರ್ವಂ ಶಿವೈಕಾತ್ಮತಯಾ ವಿಭಾತಿ ||
ಸ್ವಕರ್ಮಮುಕ್ತಶ್ಶಿವಭಾವಿತಾತ್ಮಾ ಸ ಪ್ರಾಣಲಿಙ್ಗೀತಿ ನಿಗದ್ಯತೇಸೌ"

ಒಬ್ಬ ಪುರುಷನೇ—ಭಕ್ತನೆಂದೂ, ಮಾಹೇಶ್ವರನೆಂದೂ, ಪ್ರಸಾದಿಯೆಂ ತಿಳಿಯಲ್ಪಟ್ಟನು. ಪುನಃ, ಆತನೇ—ಪ್ರಾಣಲಿಂಗಿಯೆಂದು ಯಾವ ಪ್ರಕಾರ ಹೇಳಲ್ಪಡುತ್ತಿಹನೆಂದರೆ, ಈ ಶಿವದೀಕ್ಷಾಸಮ್ಪನ್ನನು ಈ ಪ್ರಕಾರವಾದ ಕರ್ಮಕಾ ದಲ್ಲಿ ಹೇಳಲ್ಪಟ್ಟ ಕ್ರಿಯಾಪ್ರಾಧಾನ್ಯದಿಂ ಭಕ್ತನೆಂದೂ, ಮಾಹೇಶ್ವರನೆಂದೂ, ಪ್ರಸ ದಿಯೆಂದೂ ಹೇಳಲ್ಪಟ್ಟನು. ಈ ಪ್ರಕಾರವಾಗಿ ರೂಪತ್ರಯಸಮ್ಪನ್ನನಿಗೆ ಜ್ಞಾ ಕಾಣ್ಡೋಕ್ತವಾದ ಜ್ಞಾನಯೋಗವು ಹೇಳಲ್ಪಡುತ್ತದೆ. ಎಂಬಲ್ಲಿ ಸಾಕ್ಷಿಯು.—

" ಭಕ್ತೋ ಮಾಹೇಶ್ವರಶ್ಚೈಷ ಪ್ರಸಾದೀತಿ ಚ ಕೀರ್ತಿತಃ ||
ಕರ್ಮಪ್ರಾಧಾನ್ಯಯೋಗೇನ ಜ್ಞಾನಯೋಗೋಸ್ಯ ಕಥ್ಯತೇ "

ಪ್ರಾಣಲಿಂಗಿಯು ಯಾರೆಂದರೆ " ಸರ್ವತತ್ವಮಯಃ ಪ್ರಾಣಃ ಸರ್ವಜ್ಞಾ ಮಯಶ್ಶಿವಃ || ಅನಯೋರ್ಯೋಗಏವೈತತ್ಪ್ರಾಣಲಿಙ್ಗಮಿಹೋಚ್ಯತೇ " ಎಂಬಾ ಮವಚನದಿಂ ಪ್ರಾಣಲಿಂಗವುಳ್ಳವನೇ ಪ್ರಾಣಲಿಂಗಿಯೆಂದೆನಿಸಿಕೊಳ್ಳುವನು. ಅದ ತೆನೆ, ಚಿದ್ರೂಪವಾದ ಬ್ರಹ್ಮವೇ ಲಿಙ್ಗವು, ಆ ಲಿಂಗದ ಪೀಠಶಕ್ತಿಯೇ ಪ್ರಣವಾ ಕವಾದ ಪ್ರಾಣಸ್ವರೂಪವುಳ್ಳದ್ದು, ಆ ಪ್ರಾಣವು ವೇದ್ಯಸಂಸ್ಕಾರ ರೂಪವಾ ಬಿನ್ದುಸ್ಫುರಣದಿಂ ಯುಕ್ತವಾಗಿ, ಚಿತ್ಕ್ರಿಯಾಸಾಮರಸ್ಯಾತ್ಮಕವಾದ ಉನ್ಮನ ಶಕ್ತಿಯಿಂ ಯುಕ್ತವಪ್ಪುದರಿಂ ಪ್ರಾಣಕ್ಕೆ ಸರ್ವತತ್ವಮಯತ್ವವು ಹೇಳಲ್ಪಟ್ಟ ಆ ಪ್ರಕಾರವಾದ ಲಿಂಗಜ್ಞಾನವುಳ್ಳವನು ಪ್ರಾಣಲಿಂಗಿಯೆಂದು ಹೇಳಲ್ಪಡುತ್ತಾನೆ ಎಂಬಲ್ಲಿ ಸಾಕ್ಷಿಯು.—

" ಲಿಙ್ಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ||
ತದ್ರೂಪಲಿಙ್ಗವಿಜ್ಞಾನೀ ಪ್ರಾಣಲಿಙ್ಗೀತಿ ಕಥ್ಯತೇ "

" ಪ್ರಾಣೇಷ್ವನ್ತರ್ಮನಸೋ ಲಿಙ್ಗಮಾಹುಃ "— " ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ | ಮಧ್ಯೇ ವಾ ಮನ ಆಸೀನಂ ವಿಶ್ವೇ ದೇವಾ ಉಪಾಸತೇ " ಎಂಬ ಅಥರ್ವಶಿರಃಕಠವಲ್ಲೀಶ್ರುತ್ಯನುಸಾರವಾಗಿ ಪ್ರಾಣಲಿಙ್ಗಸ್ಥಲವಂ ನಿರೂಪಿಸುವೆನದೆಂತೆನೆ.—

ದೇಶಿಕೋಪದೇಶದಿಂ ಪ್ರಾಣಾಪಾನವಾಯುಗಳಿಗೆ ಸಂಘಟ್ಟನಮುಂಟಾಗಲು; ನಾಭಿಕಂದದ ಮಧ್ಯದದೆಸೆಯಿಂದ ಯಾವುದೊಂದು ತೇಜಸ್ಸು ಉಂಟಾಗುತ್ತಿಹುದೋ, ಅದು—ಪ್ರಾಣಲಿಂಗವೆಂದು ಪ್ರಾಣಾಪಾನವಾಯುಗಳಂ ನಿರೋಧಿಸುವ ಶಿವಯೋಗಿಗಳಿಂ ಪೇಳಲ್ಪಟ್ಟಿಹುದು. ಎಂಬಲ್ಲಿ ಸಾಕ್ಷಿಯು.—

" ಪ್ರಾಣಾಪಾನಸಮಾಘಾತಾತ್ ಕನ್ದಮಧ್ಯಾದ್ಯದುತ್ಥಿತಮ್ ||
ಪ್ರಾಣಲಿಙ್ಗಂ ತದಾಖ್ಯಾತಂ ಪ್ರಾಣಾಪಾನನಿರೋಧಿಭಿಃ "

ಮತ್ತಂ, ಸೂರ್ಯೋದಯವಾದರೆ, ಸೂರ್ಯನಲ್ಲಿ ಮಂಜು ಲಯವಂಪಡೆಯುತ್ತಿರುವಂತೆ, ಪ್ರಾಣವಾಯುವು—ಯಾವ ಪರಬ್ರಹ್ಮಮಯವಾದ ಶಿವಲಿಙ್ಗದಲ್ಲಿ ಲಯವಂ ಹೊಂದುತ್ತಿರುವುದೋ, ಅದು—ಪ್ರಾಣಲಿಙ್ಗವೆಂದು ಹೇಳಲ್ಪಟ್ಟಿಹುದು, ಆ ಪ್ರಾಣಲಿಙ್ಗದ ಪರಾಮರ್ಶಮುಳ್ಳವನು ತತ್ಸ್ವರೂಪವೇ ಆಗುವನು. ಎಂಬಲ್ಲಿ ಸಾಕ್ಷಿಯು.—

" ಪ್ರಾಣೋ ಯತ್ರ ಲಯಂ ಯಾತಿ ಭಾಸ್ಕರೇ ತುಹಿನಂ ಯಥಾ ||
ತತ್ಪ್ರಾಣಲಿಙ್ಗಮುದ್ದಿಷ್ಟಂ ತದ್ಧಾರೀ ಸ್ಯಾತ್ತದಾಕೃತಿಃ "

ಈ ದೇಶವು, ಈ ಕಾಲವು ಎಂಬ ಉಪಾಧಿಗಳಿಲ್ಲದೆ, ವಿಶೇಷಾಕಾರಂಗಳೂ ಇಲ್ಲದೆ, ಸಾಮಾನ್ಯವಾಗಿ ನಾನೆಂಬ ತೋರಿಕೆಯಾದ ಅಹಂತೆಯೇ ಪ್ರಾಣಲಿಂಗವೆಂಬುವುದು ಭಾವಾರ್ಥವು.

ಮತ್ತಂ, ಪಂಚವಾಯು ಪ್ರಾಣಗುಣಂಗಳುಳ್ಳ ಲಿಙ್ಗದಲ್ಲಿ ಸಮಾಧಾನಚಿತ್ತವಾಗಿರೋಣವೂ, ಇಷ್ಟಲಿಙ್ಗವೇ ಪ್ರಾಣವಾಗಿರೋಣವೂ, ಸುಖದುಃಖಂಗಳೆರಡೂ ಇಲ್ಲದಿರೋಣವೂ ಪ್ರಾಣಲಿಂಗಿಸ್ಥಲವಹುದು. ಎಂಬಲ್ಲಿ ಸಾಕ್ಷಿಯು.—

" ವಾಯುಪ್ರಾಣಗುಣೇ ಲಿಂಗೇ ಲಿಙ್ಗಪ್ರಾಣೇ ಸಮಾಹಿತಃ ||
ಸುಖದುಃಖೋಭಯಂ ನಾಸ್ತಿ ಪ್ರಾಣಲಿಂಗಿಸ್ಥಲಂ ಭವೇತ್ "

ಆ ಲಿಙ್ಗವು ಯಾರಿಗೆ ಸ್ಫುರಿಸುತ್ತಿಹುದೆನೆ.—" ಹೃದಯೇ ವೈ ಬ್ರಹ್ಮ ಸೋಮಸೂರ್ಯಾಗ್ನಿಮಣ್ಡಲೇ ನಿವಾತದೀಪೋಪಮಸ್ಥಾಯಿ ಹೃದ್ಯಂ ತಜ್ಜ್ಯೋತಿಃಪುರು

ಷಃ '' ಎಂಬ ಶ್ರುತಿಯಿಂ ಪ್ರಸಿದ್ಧಮಾಗಿ ಸ್ಫುರಣರೂಪಮಾದ ಪರಬ್ರಹ್ಮಮಪ್ಪ ಪ್ರಾಣಲಿಙ್ಗವು— ಶಿವಯೋಗಯುಕ್ತರಾದ ಶಿವಜ್ಞಾನಿಗಳಿಗೆ ಹೃದಯಕಮಲದ್ದ ದೀಪವೋಪಾದಿಯಲ್ಲಿ ಪ್ರಕಾಶಿಸುತ್ತಿಧೆ. ಅದು ಗುರೂಪದೇಶವಿಲ್ಲದ ಮೂಢರು ತಿಳಿಯಲ್ಪಡುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಜ್ಞಾನಿನಾಂ ಯೋಗಯುಕ್ತಾನಾಮನ್ತಸ್ಸ್ಫುರತಿದೀಪವತ್ ||
ಚಿದಾಕಾರಂ ಪರಂಬ್ರಹ್ಮ ಲಿಙ್ಗಮಜ್ಞೈರ್ನ ಭಾವ್ಯತೇ ''

ಈ ಪ್ರಕಾರಮಾಗಿ ಹೃದಯಕಮಲದೊಳ್ ಜ್ಯೋತಿಸ್ವರೂಪವಾಗಿ ಸರ್ವೋತ್ಕೃಷ್ಟವಾಗಿ ಇರುವ ಶಿವಾತ್ಮಕಮಾದ ಪ್ರಾಣಲಿಙ್ಗವಂ ಬಿಟ್ಟು, ಬಾಹ್ಯಲಿಙ್ಗದ್ದ ಮನಸ್ಸಿಟ್ಟವರು ಮೂಢರೆಂಬಲ್ಲಿ ಸಾಕ್ಷಿಯು.—

" ಅನ್ತಸ್ಸ್ಥಿತಂ ಪರಂಲಿಙ್ಗಂ ಜ್ಯೋತೀರೂಪಂ ಶಿವಾತ್ಮಕಮ್ ||
ವಿಹಾಯ ಬಾಹ್ಯಲಿಙ್ಗಸ್ಥಾ ವಿಮೂಢಾ ಇತಿ ಕೀರ್ತಿತಾಃ ''

ಇಲ್ಲಿ ಬಾಹ್ಯಲಿಙ್ಗವೆಂದರೆ ಸ್ಥೂಲಶರೀರಾಧಿಷ್ಠಿತವಾದ ಇಷ್ಟಲಿಙ್ಗಕ್ಕಿಂತ ಬೇರೆಯಾದ ಸ್ಥಾವರಲಿಙ್ಗವೆಂದರ್ಥವು, ಹ್ಯಾಗೆಂದರೆ '' ಏವಂ ಕೃತ್ವಾ ಗುರುರ್ಲಿಙ್ಗಂ ಶಿಷ್ಯಹಸ್ತೇ ನಿಧಾಪಯೇತ್ || ಪ್ರಾಣವದ್ಧಾರಣೀಯನ್ತು ಪ್ರಾಣಲಿಙ್ಗಮಿದಂ ತವ || ಕದಾಚಿತ್ಕುತ್ರಚಿದ್ವಾಪಿ ನ ವಿಯೋಜಯ ದೇಹತಃ '' ಎಂಬಾಗಮವಚನದಿಂ, ಇಷ್ಟಲಿಙ್ಗವೇ— ಪ್ರಾಣಲಿಙ್ಗವೆಂಬುದರಿಂದಲೂ, ಮತ್ತಂ, "ಪ್ರಾಣಲಿಙ್ಗೇತು ವಿಚ್ಛಿನ್ನೇ ತೇನ ಪ್ರಾಣಾನ್ಪರಿತ್ಯಜೇತ್ || ಪ್ರತಿದೀಕ್ಷಾಂ ಪ್ರಾಪ್ಯ ಶಿಷ್ಯೋ ರೌರವಂ ನರಕಂ ವ್ರಜೇತ್ '' ಎಂಬ ವಚನದಿಂದಲೂ, " ಏತತ್ಪ್ರಾಣಮಯಂ ಲಿಙ್ಗಂ ಯಾವಜ್ಜೀವಂ ಸಮರ್ಚಯ || ಏತನ್ನಾಶೇ ತವ ಪ್ರಾಣಾನ್ ಪರಿತ್ಯಜ ಮಹಾವ್ರತೇ '' ಎಂಬ ವಚನದಿಂದಲೂ, " ಇತಿ ವಿಜ್ಞಾಪಿತಂಶಮ್ಭುಂ ತೇಜಸಾ ಭಾಸ್ವರಂ ಸ್ಮರೇತ್ || ತಲ್ಲಿಙ್ಗಂ ಸ್ಥಾಪ್ಯ ತಚ್ಛಿಷ್ಯೇಪ್ರಾಣಲಿಙ್ಗಮಿದಂ ತವ || ಏವಮುಕ್ತ್ವಾ ಗುರುರ್ಲಿಙ್ಗಂ ನ ಕದಾಚಿದ್ವಿಯೋಜಯ '' ಎಂಬವಚನದಿಂದಲೂದೀಕ್ಷಾಪೂರ್ವಕವಾಗಿ ಇಷ್ಟಲಿಙ್ಗವಂ ಧಾರಣೆಮಾಡುವಕಾಲದಲ್ಲಿ ಮಾಡಲ್ಪಟ್ಟ ಗುರೂಪದೇಶದಿಂ ಇಷ್ಟಲಿಙ್ಗವೇ ಪ್ರಾಣಲಿಙ್ಗವೆಂದು ತಿಳಿಸಲ್ಪಟ್ಟಿತು. ಆದ್ದರಿಂದ ಇಷ್ಟಲಿಙ್ಗವು— ದಾನನ್ದಸಮ್ಬನ್ಧದಿಂ ಪ್ರಾಣಲಿಂಗವೆಂದು ನಿಶ್ಚಿತಮಕ್ಕುಂ. " ಇಷ್ಟಲಿಙ್ಗಂ ಪ್ರಾಣಲಿಙ್ಗಂ ಚೈಕೀಕೃತ್ಯ ಸಮರ್ಚಯೇತ್ '' ಎಂದುವಚನವಿರುವುದರಿಂದ ಇಷ್ಟಲಿಙ್ಗದಲ್ಲಿಯೇ ಪ್ರಾಣಲಿಂಗಾರ್ಚನೆಯಾಗುತ್ತದೆಯಾದ್ದರಿಂದ ಪ್ರಾಣಲಿಂಗಪೂಜಾಪೂರ್ವಕಮಾಗಿ ಇಷ್ಟಲಿಂಗಾರ್ಚನೆಯಂ ಮಾಡಬೇಕು. ಆ ಕಾರಣದಿಂದ ಸ್ಥಾವರಲಿಙ್ಗವೂ ತತ್ಪೂಜಾಸಾಧಕದ್ರವ್ಯಗಳೂ ಬಾಹ್ಯವೆಂದೆನಿಸಿಕೊಳ್ಳುತ್ತವೆ.

ಯಾವನು— ಬಾಹ್ಯವಸ್ತುಗಳಲ್ಲಿ ವಿಮುಖನಾಗಿ, ಯಾವಾಗಲೂ ಚಿದ್ರೂಪವಾದ ಪ್ರಾಣಲಿಙ್ಗದಲ್ಲಿ ವಿಚಾರವುಳ್ಳವನಾಗಿರುತ್ತಾನೋ, ಆತನು— ಪ್ರಾಣಲಿಙ್ಗಿಯೆಂದು ಹೇಳಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಸಂವಿಲ್ಲಿಙ್ಗಪರಾಮರ್ಶೀ ಬಾಹ್ಯವಸ್ತುಪರಾಙ್ಮುಖಃ ||
ಯಸ್ಸದಾವರ್ತತೇ ಯೋಗೀ ಪ್ರಾಣಲಿಂಗೀ ಸ ಉಚ್ಯತೇ "

ಜಗತ್ತು ಮಾಯಾಗುಣಭೇದದಿಂದುಂಟಾಗಿರುವುದರಿಂದ ಬಿಡಲ್ತಕ್ಕುದು. ಯಾವಾಗಲೂ ಸಚ್ಚಿದಾನನ್ದರೂಪವಾದ ಪ್ರಾಣಲಿಙ್ಗದಲ್ಲಿ ಮನೋಲಯವುಳ್ಳವನು ಪ್ರಾಣಲಿಙ್ಗಿಯು. ಎಂಬಲ್ಲಿ ಸಾಕ್ಷಿಯು.—

" ಮಾಯಾವಿಕಲ್ಪಜಂ ವಿಶ್ವಂ ಹೇಯಂ ಸಂಚಿನ್ತ್ಯ ನಿತ್ಯಶಃ ||
ಚಿದಾನನ್ದಮಯೇ ಲಿಂಗೇ ವಿಲೀನಃ ಪ್ರಾಣಲಿಙ್ಗವಾನ್ "

ಚಿಲ್ಲಿಙ್ಗವೆಂಬುವದು—ನಾದಬಿನ್ದುಕಲಾತೀತವಾದದ್ದು. ಪ್ರಾಣವು—ನಾದಬಿನ್ದುಕಲಾತ್ಮಕವಾದದ್ದು. ಆದುದರಿಂದೀ ಪ್ರಾಣಕ್ಕೆ ಪೀಠರೂಪತ್ವವೆಂತು ಘಟಿವುದೆನೆ,— ಸತಃ—ಭಾವಃ ಸತ್ತಾ, ಎಂಬ ವ್ಯುತ್ಪತ್ತಿಬಲದಿಂದ ನಾನಾದೆನೆಂಬ ಉತ್ತಮಪುರುಷನಿಷ್ಠಸ್ಫೂರ್ತಿಯೇ ಚಿಲ್ಲಿಙ್ಗಕ್ಕೆ ಜೀವನಭೂತವಾದ ಶಕ್ತಿಯು, ಆ ಸ್ಫುರಣೆಯಿಲ್ಲದಿರ್ದೊಡೆ ಚಿಲ್ಲಿಂಗವು ಜಡವಪ್ಪುದು, ಆದ್ದರಿಂದ ಆ ಸ್ಫುರಣೆಯುಳ್ಳ ಉತ್ತಮಪುರುಷನೇ ಪ್ರಾಣಲಿಂಗವು. ಆ ಶಿವಶಕ್ತಿಗಳ ಅನ್ಯೋನ್ಯ ಸಾಮರಸ್ಯಜ್ಞಾನವುಳ್ಳವನು ಪ್ರಾಣಲಿಂಗಿಯು. ಎಂಬಲ್ಲಿ ಸಾಕ್ಷಿಯು.—

" ಸತ್ತಾ ಪ್ರಾಣಮಯೀ ಶಕ್ತಿಃ ಚಿದ್ರೂಪಂ ಪ್ರಾಣಲಿಙ್ಗಕಮ್ ||
ತತ್ಸಾಮರಸ್ಯವಿಜ್ಞಾನಾತ್ ಪ್ರಾಣಲಿಂಗೀತಿ ಕಥ್ಯತೇ "

ಇತಿ ಶ್ರೀಮತ್ಪರಶಿವ ಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತನಿರ್ಮಲಜ್ಞಾನ
ವೈಭವನಾದ, ನಿಖಿಲನಿಗಮಾಗಮೇತಿಹಾಸಸ್ಮೃತಿ ಪುರಾಣ ಪದವಾಕ್ಯ
ಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವಸಾ
ಮ್ರಾಜ್ಯ ಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾ
ರ್ಯನಿಂ ಸಙ್ಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್
ಷಟ್ಸ್ಥಲಪ್ರಕರಣದಲ್ಲಿ ಪ್ರಾಣಲಿಂಗಿಸ್ಥಲ
ನಿರೂಪಣಮ್.



ಶ್ರೀಃ.

ಶ್ರೀಚನ್ದ್ರಮೌಳಯೇನಮಃ.

## ಶರಣಸ್ಥಲವು.



ಶರಣಸ್ಥಲ ಲಕ್ಷಣಕ್ರಮವದೆಂತೆನೆ.—

ಪ್ರಾಣಲಿಙ್ಗ ಪೂಜಾಚರಣ ಮೊದಲಾದ ಶಿವಧರ್ಮಗಳಿಂ ಕೂಡಿದವನೂ, ಶಿವಾಙ್ಗರೂಪದಿಂ ಭಾವಿಸಲ್ಪಟ್ಟ ಸ್ವಸ್ವರೂಪಮುಳ್ಳವನೂ ಆದ ಭಕ್ತನಿಂ ನಾಲ್ಕನೆಯವನಾದ ಆ ಈ ಪ್ರಾಣಲಿಂಗಿಯೇ ಜ್ಞಾನಪರಿಪಾಕವಶದಿಂ ಶರಣನೆಂದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

" ಯಃ ಪ್ರಾಣಲಿಙ್ಗಾರ್ಚನಭಾವಪೂರ್ವೈಃ
ಧರ್ಮೈರುಪೇತಶ್ಶಿವಭಾವಿತಾತ್ಮಾ ||
ಸಏವ ತುರ್ಯಃ ಪರಿಕೀರ್ತಿತೋಽಸೌ
ಸಂವಿದ್ವಿಪಾಕಾಚ್ಛರಣಾಭಿಧಾನಃ "

ಶಿವಜ್ಞಾನವೇ ಸ್ವರೂಪಮಾಗುಳ್ಳ ಅಂಗಲಿಂಗಸಾಮರಸ್ಯಜ್ಞಾನಿಯಾದ ಪ್ರಾಣಲಿಂಗಿಯೇ ಸತಿಯೆಂದು ತಿಳಿಯಲ್ಪತಕ್ಕದು. ಆ ಅಂಗಲಿಙ್ಗರೂಪಮಾದ ಸ್ತ್ರೀಪುರುಷರ ಸಮಾನ ಸಾಮರಸ್ಯರೂಪ ಯೋಗದಲ್ಲಿ " ತದ್ಯಥಾ ಪ್ರಿಯಯಾ ಸ್ತ್ರಿಯಾ ಸಮ್ಪರಿಷ್ವಕ್ತೋ ನ ಬಾಹ್ಯಂ ಕಿಞ್ಚನ ವೇದನಾನ್ತರಮೇವಮೇವಾಯಂ ಪುರುಷ ಪ್ರಾಜ್ಞೇನಾತ್ಮನಾ ಸಮ್ಪರಿಷ್ವಕ್ತೋ ನ ಬಾಹ್ಯಂ ಕಿಞ್ಚನ ವೇದನಾನ್ತರಮ್" ಎಂಬ ಬೃಹದಾರಣ್ಯಕ ಶ್ರುತಿಪ್ರಸಿದ್ಧಮಾದ ಯಾವ ಸೌಖ್ಯಮುಂಟೋ, ತಾದೃಶಸೌಖ್ಯಮುಳ್ಳವನೇ ಶರಣನೆಂದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

" ಅಙ್ಗಲಿಂಗೀ ಜ್ಞಾನರೂಪಸ್ಸತೀ ಜ್ಞೇಯಶ್ಶಿವಃ ಪತಿಃ ||
ಯತ್ಸೌಖ್ಯಂ ತತ್ಸಮಾವೇಶೇ ತದ್ವಾಞ್ಛರಣನಾಮವಾನ್ "

ಮತ್ತಂ, ಸಚ್ಚಿದಾನನ್ದಾತ್ಮಕವಾದ ಶಿವಲಿಙ್ಗಮೂರ್ತಿಯೇ ಪತಿಯು, ನಾನೇ ಸತಿಯು, ಎಂದು ಮನಸ್ಸಿನಲ್ಲಿ ತಿಳಿದು, ತಾನು ಸಮರ್ಥನಾಗಿ, ವಿಷಯಸುಖಸಮ್ಬನ್ಧಮಿಲ್ಲದೆ ಇರತಕ್ಕದ್ದು ಶರಣಸ್ಥಲಲಕ್ಷಣವೆಂಬಲ್ಲಿ ಸಾಕ್ಷಿಯು.—

" ಸತೀ ಚಾಹಂ ಪತಿರ್ಲಿಙ್ಗಂ ಹೃದಿ ಯುಕ್ತಸ್ಸ್ವಯಂ ಪ್ರಭುಃ ||
ಅಪ್ರಕ್ಷುಬ್ಧಸುಖಸ್ಸ್ತೋ ನಾಸ್ತಿ ಶರಣಸ್ಥಲಮುತ್ತಮಮ್ "

ಪ್ರಾಣಕಾನ್ತನ ವಿಷಯದಲ್ಲಿ ಪತಿವ್ರತೆಯಾದ ಸ್ತ್ರೀಯಂತೆ, ಯಾವನು-ತನ್ನಿಷ್ಟಲಿಙ್ಗವಿಷಯದಲ್ಲಿ ತನ್ನನ್ನು ಸ್ತ್ರೀಯನ್ನಾಗಿ ಭಾವಿಸುತ್ತ, ಆ ಲಿಙ್ಗಕ್ಕಿಂತ ಬೇರೆಯಾದುದರಲ್ಲಿ ಪರಾಙ್ಮುಖನಾಗಿರುತ್ತಾನೆಯೋ, ಆತನು-ಶರಣನು ಎಂಬಲ್ಲಿ— ಸಾಕ್ಷಿಯು.—

" ಸತೀವ ರಮಣೇ ಯಸ್ತು ಶಿವೇ ಶಕ್ತಿಂ ವಿಭಾವಯನ್ ||
ತದನ್ಯವಿಮುಖಸ್ಸೋಽಯಂ ಜ್ಞಾತಶ್ಶರಣನಾಮವಾನ್ "

ಪರಮಾತ್ಮನಾದ ಶಿವಸ್ವಾಮಿಯು-ಪ್ರತ್ಯಕ್ಷವೂ ಪ್ರಸಿದ್ಧವೂ ಆದ ಶ್ರುತ್ಯಾದಿ ಪ್ರಮಾಣಂಗಳಿಂದ ಬ್ರಹ್ಮಾದಿಗಳಿಂದಲೂ ಅಧಿಕನೆಂದು ತಿಳಿಯಲ್ಪಡುತ್ತಿರಲಾಗಿ, ಮಹತ್ತಾದ ಜೀವರತ್ನವು ದೊರಕಿರಲಾಗಿ ಗಾಜಿನಮಣಿಯನ್ನು ಯಾವನೂ ಯಾಚಿಸದಿರುವಂತೆ, ಅನ್ಯದೇವತೆಯಂ ಬಯಸದಿರತಕ್ಕವನೇ ಶರಣನು. ಎಂಬಲ್ಲಿ ಸಾಕ್ಷಿಯು.

" ಪರಿಜ್ಞಾತೇ ಶಿವೇ ಸಾಕ್ಷಾತ್ಕೋವಾನ್ಯಮಭಿಕಾಙ್ಕ್ಷತಿ||
ನಿಧಾನೇ ಮಹತಿ ಪ್ರಾಪ್ತೇ ಕಃ ಕಾಚಂ ಯಾಚತೇಽನ್ಯತಃ "

ಗಙ್ಗಾಮೃತವಂ ಹೊಂದಿದವನು ಮರೀಚಿಕಾಜಲವಂ ಬಯಸದಂತೆ, ಶಿವಲಿಙ್ಗಸುಖಮಂ ಪಡೆದವನು ಅನ್ಯದೈವವಂ ಬಯಸುವುದಿಲ್ಲವು. ಎಂಬಲ್ಲಿ ಸಾಕ್ಷಿಯು.-

" ಶಿವಾನನ್ದಂ ಸಮಾಸಾದ್ಯ ಕೋವಾನ್ಯ ಮುಪತಿಷ್ಠತೇ ||
ಗಙ್ಗಾಮೃತಂ ಪರಿತ್ಯಜ್ಯ ಕಃ ಕಾಂಕ್ಷೇನ್ಮೃಗತೃಷ್ಣಿಕಾಮ್ "

ಸೂರ್ಯನನ್ನು ಹೊರತಾಗಿ, ಅಲ್ಪಪ್ರಕಾಶಿಗಳಾದ ಖದ್ಯೋತಗಳು ಅನ್ಧಕಾರವಂ ಕೆಡಿಸುವುದರಲ್ಲಿ ಹ್ಯಾಗೆ ಸಮರ್ಥಗಳಲ್ಲವೋ, ಹಾಗೆ ದೇಹಿಗಳಿಗೆ ಸಂಸಾರವೆಂಬ ಕತ್ತಲೆಯನ್ನು ಕೆಡಿಸುವುದರಲ್ಲಿ ಶಙ್ಕರನೆಂಬ ಸೂರ್ಯನು-ಶಕ್ತನಲ್ಲದೆ, ಬ್ರಹ್ಮಾದಿದೇವತೆಗಳು ಶಕ್ತರಲ್ಲವೆಂದು ತಿಳಿದು, ಶಿವೇತರ ದೇವತೆಗಳಲ್ಲಿ ವಿಮುಖನು ಶರಣನೆಂಬಲ್ಲಿ ಸಾಕ್ಷಿಯು.—

" ಸಂಸಾರತಿಮಿರಚ್ಛೇದೇ ವಿನಾ ಶಙ್ಕರಭಾಸ್ಕರಮ್ ||
ಪ್ರಭವನ್ತಿ ಕಥಂದೇವಾಃ ಖದ್ಯೋತಾ ಇವ ದೇಹಿನಾಮ್ "

ಮತ್ತಂ, ಪಿಪಾಸಾಯುಕ್ತವಾದ ಚಕೋರಪಕ್ಷಿಯು-ಚನ್ದ್ರನನ್ನೇ ನೋಡುವುದಲ್ಲದೆ ನಕ್ಷತ್ರಗಳಂ ನೋಡದಂತೆ, ಸಂಸಾರದಿಂ ಬಳಲಿದ ದೇಹಿಯು-ಬ್ರಹ್ಮಾದಿಗಳಿಂದ ಫಲವಿಲ್ಲವೆಂದು, ಅವರುಗಳ ವಿಷಯದಲ್ಲಿ ವಿಮುಖನಾಗಿ, ಶಿವನಲ್ಲಿಯೇ ಎರಗಿದ ಚಿತ್ತವುಳ್ಳವನು ಶರಣನು. ಎಂಬಲ್ಲಿ ಸಾಕ್ಷಿಯು.—

" ಸಂಸಾರಾರ್ತ್ತಶ್ಶಿವಂ ಯಾಯಾದ್ಬ್ರಹ್ಮಾದ್ಯೈಃ ಕಿಂ ಫಲಂ ಸುರೈಃ ||
ಚಕೋರಸ್ತೃಷಿತಃಪಶ್ಯೇಚ್ಚನ್ದ್ರಂ ಕಿಂ ತಾರಕಾಅಪಿ "

ಶಿವಲಿಙ್ಗಕ್ಕಿಂತಲೂ ಅನ್ಯವಾದ ದೇವತಾನ್ತರವಿಶೇಷಜ್ಞಾನದಲ್ಲಿ ವೈಮುಖ್ಯವುಳ್ಳುದರಿಂ, ಯಾವನ ಮನೋವ್ಯಾಪಾರವು ಶಿವಲಿಙ್ಗದಲ್ಲಿ ಏಕಕವಾಗಿರುವುದೋ ಆತನನ್ನು ಶರಣನನ್ನಾಗಿ ಹೇಳುತ್ತಿಹರು. ಎಂಬಲ್ಲಿ ಸಾಕ್ಷಿಯು.—

" ಶಿವಾದನ್ಯತ್ರವಿಜ್ಞಾನೇ ವೈಮುಖ್ಯಂ ಯಸ್ಯ ಸುಸ್ಥಿರಮ್ ||
ತದಾಸಕ್ತಾ ಮನೋವೃತ್ತಿಃ ತಮಾಹುಶ್ಶರಣಾಭಿಧಮ್ "

ಮತ್ತಂ, ಪತಿವ್ರತೆಯು ಪಾತಿವ್ರತ್ಯವು-ತನ್ನ ಪತಿಯಲ್ಲಿಯ ಪ್ರೀತಿಯುಳ್ಳುದರಿಂದೆಂತು ಕೊಂಡಾಡಲ್ತಕ್ಕುದಾಗಿರುತ್ತದೆಯೋ, ಹಾಗೆ ಅನ್ಯದೇವತೆಯಲ್ಲಿ ಪ್ರೀತಿಯೂ ಇಲ್ಲದೆ, ಶಿವನಲ್ಲಿ ಪ್ರೀತಿವಿಯೋಗವಿಲ್ಲದ ಭಕ್ತನು ಶರಣನೆಂದು ಹೇಳಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಪತಿವ್ರತಾಯಾ ಯಚ್ಛೀಲಂ ಪತಿರಾಗಾತ್ಪ್ರಶಸ್ಯತೇ ||
ತಥಾ ಶಿವಾನುರಾಗೇಣ ಭಕ್ತಶ್ಶರಣ ಉಚ್ಯತೇ "

ಮತ್ತಂ, ಸ್ತ್ರೀಯರಿಗೆ ಪತಿಯನ್ನು ಹೊರತಾಗಿ, ಪರಪುರುಷರ ಸೇವೆಯೆಂತು ನಿಂದಿಸಲ್ಪಟ್ಟುದೋ, ಹಾಗೆ ಕೃತಕೃತ್ಯರಾದ ಶರಣರಿಗೆ ಶಿವಲಿಙ್ಗಕ್ಕಿಂತಲೂ ಅನ್ಯವಾದ ವಿಷ್ಣ್ವಾದಿದೇವತೆಗಳ ಸೇವೆಯು ನಿಂದಿತವಾದುದೆಂಬಲ್ಲಿ ಸಾಕ್ಷಿಯು.-

" ಪತಿಂ ವಿನಾ ಯಥಾ ಸ್ತ್ರೀಣಾಂ ಸೇವಾನ್ಯಸ್ಯ ತು ಗರ್ಹಿತಾ ||
ಶಿವಂ ವಿನಾ ತಥಾನ್ಯೇಷಾಂ ಸೇವಾ ನಿನ್ದ್ಯಾ ಕೃತಾತ್ಮನಾಮ್ "

ಇತಿ ಶ್ರೀಮಚ್ಛಿವಶರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾನವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ ಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಙ್ಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್ ಷಟ್ಸ್ಥಲಪ್ರಕರಣದಲ್ಲಿ ಶರಣಸ್ಥಲ ನಿರೂಪಣಮ್.

ಶ್ರೀಃ.

ಶ್ರೀಮೃತ್ಯುಞ್ಜಯಾಯನಮಃ.

# ಐಕ್ಯಸ್ಥಲಮ್.

ಐಕ್ಯಸ್ಥಲಲಕ್ಷಣಕ್ರಮವದೆಂತೆನೆ.—

ಲಿಙ್ಗಾಙ್ಗಜ್ಞಾನದಲ್ಲಿಯೇ ತತ್ಪರನಾಗಿ, ಜಗತ್ಪತಿಯಾದ ಶಿವನಂ ಕುರಿತು, ರಕ್ಷಿಸು ಎಂದು ಮರೆವೊಕ್ಕವನೂ, ದೃಢವಾದ ಸತಿಪತಿಭಾವದಿಂ ಕೂಡಿದ ಚಿತ್ತವುಳ್ಳವನೂ, ಇಷ್ಟಲಿಙ್ಗವೊಂದರಲ್ಲಿಯೇ ನಿಷ್ಠೆಯಿಂ ಮಾಡಲ್ಪಟ್ಟ ಶೀಲವೆಂಬ ಅಲಙ್ಕಾರವುಳ್ಳವನೂ ಆದ ಈ ಶರಣನು—ಶಿವಲಿಂಗೈಕ್ಯನು ಎಂದು ಹೇಳಲ್ಪಡುವನು. ಎಂಬಲ್ಲಿ ಸಾಕ್ಷಿಯು.—

"ಶಿವಾತ್ಮಬೋಧೈಕರತಸ್ಸ್ಥಿರಾಶಯಃ
ಶಿವಂ ಪ್ರಸನ್ನೋ ಜಗತಾಮಧೀಶ್ವರಮ್ ‖
ಶಿವೈಕನಿಷ್ಠಾಹಿತಶೀಲಭೂಷಣಃ
ಶಿವೈಕ್ಯವಾನೇಷ ಹಿ ಕಥ್ಯತೇ ಬುಧೈಃ"

ಇಷ್ಟ ಪ್ರಾಣ ಭಾವಲಿಙ್ಗ ಪೂಜಾಧ್ಯಾನದಿಂ ಸುಖಾತಿಶಯವನ್ನು ಪಡೆದ ಶರಣನು—ಶಿವನೊಡತನದೇಕತ್ವಚಿನ್ತನೆಯಂ ಮಾಡುವುದು ಹ್ಯಾಗೆಂದರೆ.—ಲಿಙ್ಗಾತ್ಮರಾದ ಈರ್ವರು ಚಿದೇಕರೂಪರಾದುದರಿಂ ಆ ಈರ್ವರಿಗೆ ಭೇದವು ಕೂಡದು, ಚಿದ್ರೂಪರಾದರೂ ವ್ಯಕ್ತಿಭೇದಮುಂಟಾಗಲಿ ಎಂದರೆ, ಆ ಚಿದ್ರೂಪನಾದ ಆತ್ಮನು ಪರಾಧೀನ ಪ್ರಕಾಶನೋ? ಸ್ವಪ್ರಕಾಶನೋ? ಎಂಬ ಶಂಕೆಗಳು ಉಂಟಾಗುತ್ತವೆ. ಪರಾಧೀನಪ್ರಕಾಶನೆಂದರೆ, ಘಟಾದಿ ವಸ್ತುಗಳಂತೆ ಜಡನಪ್ಪನು, ಆದ್ದರಿಂದ ಪರಾಧೀನಪ್ರಕಾಶನಲ್ಲವು. ಸ್ವಪ್ರಕಾಶನೆಂದರೆ, ಪರಿಮಿತಪ್ರಕಾಶನೋ? ಅಪರಿಮಿತಪ್ರಕಾಶನೋ? ಎಂಬ ಶಂಕೆಗಳು ಸಂಭವಿಸುತ್ತವೆ. ಪರಿಮಿತಪ್ರಕಾಶನೆಂದರೆ, ಘಟಪಟಾದಿಗಳ ಪ್ರಕಾಶದಂತೆ ಸ್ವವಿಷಯ ಸ್ವಮಾತ್ರ ಪ್ರಕಾಶಕನಾಗಿ, ಪರವಿಷಯ ಪರಸ್ವರೂಪದಲ್ಲಿ ಅನ್ಧಬಧಿರ ಸದೃಶನಾಗುವನಾದ್ದರಿಂದ ಪರಿಮಿತಪ್ರಕಾಶನಲ್ಲವು. ಅಪರಿಮಿತಪ್ರಕಾಶನೆಂದರೆ, ಚೈತ್ರಂ—ಮೈತ್ರನಿಂ ಭಿನ್ನನು, ಮೈತ್ರಂ—ಚೈತ್ರನಿಂ ಭಿನ್ನನು ಎಂಬ ಜ್ಞಾನವಿಲ್ಲದವನಾಗುವುದರಿಂದ ಅಪರಿಮಿತ ಪ್ರಕಾಶನಲ್ಲವು. ಪ್ರಕಾಶದ್ವಯಾಙ್ಗೀಕಾರವು ಸಮ್ಭವಿಸಲಿ ಎಂದರೆ, ಚೈತ್ರೋಽಹಂ—ಎಂಬ ಪ್ರಕಾಶದಿಂ ಕೂಡಿರುವ ಕಾರಣದಿಂ ಪ್ರಕಾಶದ್ವಯಾಙ್ಗೀಕಾರವು ಅನುಪಪನ್ನವಾಗುತ್ತದೆ.

ಪೂಜ್ಯಪೂಜಕಭಾವಾದಿ ಸಮ್ಪತ್ತಿಗೋಸ್ಕರ ಸ್ವಾತನ್ತ್ರ್ಯಪರಿಕಲ್ಪಿತಭೇದವನ್ನ ರಿಸಬೇಕಾದುದರಿಂ, ಮುಖ್ಯಪ್ರಕಾಶವೊಂದೇ ಎಂದು ತಿಳಿಯಲ್ಪತಕ್ಕದು. ಸ್ವ ತ್ವ ಕಿಂಚಿಜ್ಞತ್ವಂಗಳು—ಮಾಯಾಕಾರ್ಯಕೋಟಿಪ್ರವಿಷ್ಟಂಗಳು. ಆದ್ದರಿಂದ, ತೃತ್ವ ಕರ್ತೃತ್ವಂಗಳೇ ಸ್ವಾಭಾವಿಕವು, ಅಲ್ಲದಿರ್ದಡೆ ಜಡತ್ವಮುಂಟಪ್ಪುದು ಯುಕ್ತಿಕಲಾಪದಿಂ ತದೇಕತ್ವಚಿನ್ತನೆಯುತ್ತಣಿಂ, ಐಕ್ಯಮುಳ್ಳವನೆಂಬುಭಯ ದಲ್ಲಿ ಸಾಕ್ಷಿಯು.—

" ಪ್ರಾಣಲಿಙ್ಗಾದಿಯೋಗೇನ ಸುಖಾತಿಶಯಮೇಯಿವಾನ್ ||
ಶರಣಾಖ್ಯತ್ವಿ ವೇನೈಕ್ಯಭಾವನಾದೈಕ್ಯವಾನ್ಭವೇತ್ "

" ಏಕಮೇವ ತದ್ಭವತ್ಯವಿಕಲ್ಪೋಽನಾವಿಕಲ್ಪೋಽಪಿ ನಾತ್ರ ಕಾಚನಭಿದಾ ನೈವ ತತ್ರ ಕಾಚನ ಭಿದಾಸ್ತ್ಯತ್ರ ಭಿದಾಮಿವ ಮನ್ಯಮಾನಶ್ಶತಧಾ ಸಹಸ್ರ ಭಿನ್ನೋ ಮೃತ್ಯೋಸ್ಸಮೃತ್ಯುಮಾಪ್ನೋತಿ ತದೇತದದ್ವಯಂ ಸ್ವಪ್ರಕಾಶಮ ಎಂಬ ನೃಸಿಹ್ಮೋತ್ತರತಾಪನೀಯ ಶ್ರುತಿಯುಂಟಾಗಿ, ಶಬ್ದಾದಿ ವಿಷಯಗಳಿಂ ಟಾದ ನಿತ್ಯವಲ್ಲದ ಸುಖಲೇಶಂಗಳಲ್ಲಿ ವಿರಕ್ತನಾಗಿ, ನಿರ್ಮಲವಾದ ಚಿತ್ತವುಳ್ಳವನು ಶಿವಾನನ್ದ ಸಮುದ್ರದಲ್ಲಿ ತಾದಾತ್ಮ್ಯಾನುಪ್ರವೇಶದಿಂ ಲಿಂಗೈಕ್ಯಸ್ಥಲಶಬ್ದವಾ ನೆಂದು ಹೇಳಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ವಿಷಯಾನನ್ದಕಣಿಕಾ ನಿಸ್ಪೃಹೋ ನಿರ್ಮಲಾಶಯಃ ||
ಶಿವಾನನ್ದಸುಧಾಸಿನ್ಧು ಮಜ್ಜನಾದೈಕ್ಯಮುಚ್ಯತೇ "

ಲಿಂಗೈಕ್ಯವು—ಎಂತಪ್ಪಂಗೆ ಘಟಿಪುದೆನೆ.—ಕೊಡಹಲ್ಪಟ್ಟ ಆಣವಾದಿ ಲತ್ರಯಸಮ್ಬನ್ಧವುಳ್ಳವನೂ, ಕಳಙ್ಗರಹಿತವಾದ ಮನೋವ್ಯಾಪಾರಮುಳ್ಳವ ಆದವನೇ 'ಶಿವೋಽಹಮ್' ಎಂಬ ಪರಾಮರ್ಶದಿಂ ಲಿಂಗೈಕ್ಯಮಂ ಪಡೆಯುತ್ತಿಹ ಎಂಬಲ್ಲಿ ಸಾಕ್ಷಿಯು.—

" ನಿರ್ಧೂತಮಲಸಮ್ಬನ್ಧೋ ನಿಷ್ಕಳಙ್ಕಮನೋಗತಿಃ ||
ಶಿವೋಽಹಮಿತಿಭಾವೇನ ನಿರೂಢೋಽಹಿ ಶಿವೈಕ್ಯತಾಮ್ "

ಚಿದಾನನ್ದಸ್ವರೂಪಮುಳ್ಳ ಶಿವನೊಡನೆ ಏಕತ್ವವಂ ಪಡೆದವನು—ಮಾ ಯೆಯಿಂ ಕಲ್ಪಿಸಲ್ಪಟ್ಟ ವಿಸ್ತಾರಮುಳ್ಳ ಜಗತ್ಸಮೂಹಮಂ ಕಾಣನು ಎಂಬ ಸಾಕ್ಷಿಯು.—

" ಯಶ್ಶಿವೈಕ್ಯಂ ಸಮಾಪನ್ನಃ ಶಿವಾನನ್ದಸ್ವರೂಪವಾನ್ ||
ನ ಪಶ್ಯತಿ ಜಗಜ್ಜಾಲಂ ಮಾಯಾಕಲ್ಪಿತವೈಭವಮ್ "

ಏನುಕಾರಣದಿಂ ಜಗತ್ಸಮೂಹವನ್ನು ಕಾಣದಿರುತ್ತಾನೆಂದರೆ,—ಬ್ರಹ್ಮಾಣ್ಡವೆಂಬ ಬುದ್ಬುದಂಗಳ ಆವಿರ್ಭಾವದಿಂ ಹೆಚ್ಚುತ್ತಿರ್ದ ಷಟ್ತ್ರಿಂಶತ್ತತ್ವಗಳೆಂಬ ತೆರೆಗಳುಳ್ಳ ಮಾಯಾಸಮುದ್ರವು— ಶಿವಲಿಙ್ಗದೊಡನೇಕತ್ವಮೆಂಬ ಬಡಬಾಗ್ನಿಯಲ್ಲಿ ಲಯಮಂ ಪಡೆಯುತ್ತಿದೆ. ಆ ಕಾರಣದಿಂ ಪ್ರಪಂಚದರ್ಶನಮಿಲ್ಲವು. ಪ್ರಪಂಚಕ್ಕೆ ಮಾಯೆಯೇ ಉಪಾದಾನಕಾರಣಮಾದುದರಿಂ, ತನ್ನಾಶಮಾಗಲಾಗಿ, ಕಾರ್ಯದರ್ಶನಮಿಲ್ಲವೆಂಬುದನಂಗೀಕರಿಸಲ್ಪತಕ್ಕುದು. ಎಂಬಲ್ಲಿ ಸಾಕ್ಷಿಯು.—

" ಬ್ರಹ್ಮಾಣ್ಡಬುದ್ಬುದೋದ್ಭೇದವಿಜೃಮ್ಭಾ ತತ್ವವೀಚಿಮಾನ್ ||
ಮಾಯಾಸಿನ್ಧುರ್ಲಯಂ ಯಾತಿ ಶಿವೈಕ್ಯಬಡಬಾನಲೇ "

ಮತ್ತಂ, ಶಿವನಲ್ಲಿ ಮಾಯಾಪ್ರಸರಣದತ್ತಣಿಂ, ಜೀವನಿಗೆ ಭೇದಜ್ಞಾನಮುಂಟಪ್ಪುದು, ಆ ಮಾಯಾಪ್ರಸಾರಕ್ಕೆ ನಾಶಮುಂಟಾಗಲಾಗಿ, ಅದ್ವೈತದತ್ತಣಿಂ ಯಾವದೂ ಇಚ್ಛಾವಿಷಯಮಾಗಿ ಮಾಡಲ್ಪಡದು. ಎಂಬಲ್ಲಿ ಸಾಕ್ಷಿಯು.—

" ಮಾಯಾಶಕ್ತಿತಿರೋಭಾವಾತ್ ಶಿವೇ ಭೇದವಿಕಲ್ಪನಾ ||
ಆತ್ಮನಸ್ತದ್ವಿನಾಶೇ ತು ನಾದ್ವೈತಾತ್ಕಿಞ್ಚಿದಿಷ್ಯತೇ "

"ಅಹಮೇಕೋ ನ ಮೇ ಕಶ್ಚಿನ್ನಾಹಮನ್ಯಸ್ಯ ಕಸ್ಯ ಚಿತ್ || ನ ತಂ ಪಶ್ಯಾಮಿ ಯಸ್ಯಾಹಂ ನ ತಂ ಪಶ್ಯಾಮಿ ಯೋಮಮ " ಎಂಬ ದೇವಿಕಾಲೋತ್ತರ ವಚನಾನುಸಾರದಿಂ, ಶಿವಲಿಂಗೈಕ್ಯಂಗೆ ಪ್ರಸಿದ್ಧಮಾದ ಶಿವಾದ್ವೈತಮಂ ಪೇಳುವೆನದೆಂತೆನೆ.—ಪಶುತ್ವವೂ, ಪತಿತ್ವವೂ, ಮಾಯಾರೂಪಮಾದ ಅಜ್ಞಾನದಿಂದುಂಟಾಗತಕ್ಕದ್ದು, ಆ ಮಾಯಾಪ್ರಸಾರವು ನಷ್ಟವಾಗಲಾಗಿ ಪಶುವೂ ಪತಿಯೂ ಇಲ್ಲವು. ಎಂಬಲ್ಲಿ ಸಾಕ್ಷಿಯು.—

" ಪಶುತ್ವಞ್ಚ ಪತಿತ್ವಞ್ಚ ಮಾಯಾಮೋಹವಿಕಲ್ಪಿತಮ್ ||
ತಸ್ಮಿನ್ ಪ್ರಳಯಮಾಪನ್ನೇ ಕಃ ಪಶುಃ ಕೋನುವಾಪತಿಃ "

ಜಡಾಜಡಭೇದವು, ಜೀವಾಜೀವಭೇದವು, ಜಡೇಶ್ವರಭೇದವು, ಜೀವೇಶ್ವರಭೇದವು ಈ ಪ್ರಕಾರಮಾದ ಭೇದಚತುಷ್ಟಯವಿಶಿಷ್ಟಮಹ ಹುತ್ತದಲ್ಲಿ ಮಲಗಿರುವ, ಜನನ ಮರಣಾದಿ ರೂಪಮಾದ, ಅತಿ ಭಯಂಕರಮಾದ, ಸಂಸಾರವೆಂಬ ಸರ್ಪಕ್ಕೆ ಘೃತಕೀಟನ್ಯಾಯದಿಂ ಜಡಚೇತನೈಕ್ಯಭಾವನೆಯೇ ಪರಮೌಷಧಮೆಂಬಲ್ಲಿ ಸಾಕ್ಷಿಯು.—

" ಘೋರಸಂಸಾರಸರ್ಪಸ್ಯ ಭೇದವಲ್ಮೀಕಶಾಯಿನಃ ||
ಬಾಧಕಂ ಪರಮಾದ್ವೈತಭಾವನಾ ಪರಮೌಷಧಮ್ "

ಆ ಕಾರಣದಿಂ ಶಿವಯೋಗಿಗಳಿಗೆ ಕ್ರೂರವಾದ ಸಂಸಾರದಲ್ಲಿ ತಾಪತ್ರಯನ್ನಿ ವೃತ್ತಿಗೋಸ್ಕರ ಅದ್ವೈತಭಾವನೆಗೆ ಸಮಾನವಾದ ಉಪಾಯವು ಇಲ್ಲವೆಂಬಲ್ಲಿ ಸಾಕ್ಷಿಯು.—

" ತಸ್ಮಾದದ್ವೈತಭಾವೇನ ಸದೃಶೋ ನಾಸ್ತಿ ಯೋಗಿನಾಮ್ ||
ಉಪಾಯೋ ಘೋರಸಂಸಾರಮಹಾತಾಪನಿವೃತ್ತಯೇ "

ಪೂರ್ವೋಕ್ತಮೈತ್ರೇಯಶ್ರುತ್ಯನುಸಾರವಾಗಿ, ಒಂದುಕ್ಷಣಮಾತ್ರದಲ್ಲಿ ಶಿವಾದ್ವೈತಭಾವನೆಯಿಂದುಂಟಾದ ಸೌಖ್ಯಮಂ ಕೋಟಿವರ್ಷದಿಂದಾದರೂ ರಾಜ್ಯಭೋಗಿಗಳಾದ ಧರಣೀಪತಿಗಳು ಪಡೆಯಲಾರರು. ಎಂಬಲ್ಲಿ ಸಾಕ್ಷಿಯು.—

" ಅದ್ವೈತಭಾವನಾಜಾತಂ ಕ್ಷಣಮಾತ್ರೇಪಿ ಯತ್ಸುಖಮ್ ||
ತತ್ಸುಖಂ ಕೋಟಿವರ್ಷೇಣ ಪ್ರಾಪ್ಯತೇ ನೈವ ಭೋಗಿಭಿಃ "

ಶಿವಾದ್ವೈತಭಾವನೆಯಿಂ ಪ್ರಪಂಚವೇ ಚಿತ್ತವೃತ್ತಿಯಲ್ಲಡಗಿದ ಶಿವಯೋಗಿಗೆ-ಶಿವಾನನ್ದದಾವಿರ್ಭಾವವೇ ಮುಕ್ತಿಯು. ಎಂಬಲ್ಲಿ ಸಾಕ್ಷಿಯು.—

" ಚಿತ್ತವೃತ್ತಿಸಮಾಲೀನ ಜಗತಶ್ಶಿವಯೋಗಿನಃ ||
ಶಿವಾನನ್ದಪರಿಸ್ಫೂರ್ತಿಃ ಮುಕ್ತಿರಿತ್ಯಭಿಧೀಯತೇ "

ಈ ಉಕ್ತಪ್ರಕಾರವಾದ ಲಕ್ಷಣಗಳುಳ್ಳವನು—ಐಕ್ಯಸ್ಥಳಸಮ್ಪನ್ನನೆಂದೆನಿಸಿಕೊಳ್ಳುವನು.

ಇತಿ ಶ್ರೀಮತ್ಪರಶಿವಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾನವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣನಾದ, ನಿರಾಭಾರ ವೀರಶೈವಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್ ಷಟ್ಸ್ಥಲಪ್ರಕರಣದಲ್ಲಿ ಐಕ್ಯಸ್ಥಲ

ನಿ ರೂ ಪ ಣ ಮ್.



|| ಶ್ರೀಃ ||

ಶ್ರೀಶಮ್ಭವೇ ನಮಃ.

# ಪ್ರಕಾರಾನ್ತರೇಣ ಷಟ್ಸ್ಥಲನಿರೂಪಣಮ್.



ಷಟ್ಸ್ಥಲವು ಬೇರೊಂದುಪ್ರಕಾರವೆಂತೆನೆ.—

ಶ್ರೀ ಪರಮೇಶ್ವರನ ಸರ್ವಜ್ಞತ್ವವು, ನಿತ್ಯತೃಪ್ತಿಯು, ಅನಾದಿಬೋಧೆಯು, ಸ್ವತನ್ತ್ರತ್ವವು, ಆವಾಗಳುಂ ಕೇಡಿಲ್ಲದ ಸಾಮರ್ಥ್ಯವು, ನಾಶರಹಿತಶಕ್ತಿಯು ಎಂಬ ಈ ಷಡಙ್ಗಗಳು ಷಟ್ಸ್ಥಲಗಳೆಂದು ಸ್ಥಳವಿಧಾನವಂ ಬಲ್ಲವರು ಹೇಳುತ್ತಿಹರು. ಎಂಬಲ್ಲಿ ಸಾಕ್ಷಿಯು.—

" ಸರ್ವಜ್ಞತಾ ತೃಪ್ತಿರನಾದಿಬೋಧಃ
ಸ್ವತನ್ತ್ರತಾ ನಿತ್ಯಮಲುಪ್ತಶಕ್ತಿಃ ||
ಅನನ್ತಶಕ್ತಿಶ್ಚ ವಿಭೋರ್ವಿಧಿಜ್ಞಾಃ
ಷಡಾಹುರಙ್ಗಾನಿ ಚ ಷಟ್ಸ್ಥಲಾನಿ "

ಸ್ಥಲಗಳನ್ನರಿತ ಮಹಾತ್ಮರಾದ ಕೆಲವರು—ಭಕ್ತಸ್ಥಲ ಮೊದಲಾದವುಗಳ ಜ್ಞಾನವನುಳ್ಳ, ಐಕ್ಯಸ್ಥಲವೇ ಕಡೆಯಾಗುಳ್ಳ ಸಾಧಿಸಲು ಯೋಗ್ಯವಹ ಬ್ರಹ್ಮಕ್ಕೆ ಸಾಧನವಾದ ಷಟ್ಸ್ಥಲವನ್ನಾಗಿ ಹೇಳುತ್ತಿಹರು. ಎಂಬಲ್ಲಿ ಸಾಕ್ಷಿಯು.—

" ಏತದಪ್ಯಪರೇ ಪ್ರಾಹುಃ ಷಟ್ಸ್ಥಲಂ ಸ್ಥಲವಿತ್ತಮಾಃ ||
ಭಕ್ತ್ಯಾದಿಜ್ಞಾನಪರ್ಯನ್ತಂ ಸಾಧ್ಯಸಾಧಕಭಾವತಃ "

ಮತ್ತಂ ಭಕ್ತಿಯು, ಸಞ್ಚಿತಾಗಾಮಿ ಪ್ರಾರಬ್ಧಕರ್ಮಗಳ ಕ್ಷಯವು, ಶಿವಜ್ಞಾನವನ್ನುಳ್ಳ ಬುದ್ಧಿಯು, ಶಾಸ್ತ್ರಪರ್ಯಾಲೋಚನೆಯಿಂ ನಿತ್ಯಾನಿತ್ಯ ವಿಚಾರವು, ಗರ್ವನಾಶವು, ಸಮ್ಯಗ್ಜ್ಞಾನವು ಎಂಬಾರುಗುಣಗಳು ಕ್ರಮದಿಂ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬಾರು ಸ್ಥಲಗಳಲ್ಲಿ ಪ್ರತಿಪಾದಿಸಲು ಯೋಗ್ಯಗಳೆಂದು ಬಲ್ಲವರಿಂದ ಹೇಳಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.—

" ಭಕ್ತಿಃ ಕರ್ಮಕ್ಷಯೋ ಬುದ್ಧಿಃ ವಿಚಾರೋ ದರ್ಪಸಂಕ್ಷಯಃ ||
ಸಮ್ಯಗ್ಜ್ಞಾನಮಿತಿ ಪ್ರಾಜ್ಞೈಃ ಸ್ಥಲಷಟ್ಕಮುದಾಹೃತಮ್ "

ಯಾವುದರಿಂ ಯಾವುದಹುದೆನೆ,—ಉತ್ತಮವಾದ ಆಚಾರದಿಂ ಭಕ್ತಿಯು, ಅದು ಶಿವನನ್ನು ಧ್ಯಾನಿಸುವರಿಂ ಐದಲ್ಪಡುತ್ತಿಹುದು. ಆ ಭಕ್ತಿಯಿಂದ ಸಞ್ಚಿತಾಗಾಮಿ ಕರ್ಮಕ್ಷಯವಹುದು, ಅದರ ದೆಸೆಯಿಂ ನಿರ್ಮಲವಹ ಬುದ್ಧಿಯಹುದು, ಆ

ನಿರ್ಮಲವಹ ಬುದ್ಧಿಯಿಂ ಶಿವತತ್ವವಿಚಾರವಹುದು, ಆ ತತ್ತ್ವವಿಚಾರದಿಂದ ಅಹಂಕಾರವು ಕೆಡುವುದು, ಆದರಿಂ ಸಮ್ಯಗ್ಜ್ಞಾನವಹುದು, ಆ ಸಮ್ಯಗ್ಜ್ಞಾನದಿಂ ಮೋಕ್ಷವಹುದು, ಆ ಮೋಕ್ಷದ ದೆಸೆಯಿಂದಧಿಕವಾದುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಕ್ರಿಯಯೋತ್ತಮಯಾ ಭಕ್ತಿಃ ಪ್ರಾಪ್ಯತೇ ಶಿವಚಿನ್ತಕೈಃ ||
ಭಕ್ತ್ಯಾ ಕರ್ಮಕ್ಷಯಸ್ತಸ್ಮಾದಮಲಾ ಧಿಷಣಾ ಭವೇತ್ ||
ಧಿಯಾ ವಸ್ತುವಿಚಾರಸ್ಸ್ಯಾತ್ ವಿಚಾರಾದ್ದರ್ಪಸಂಕ್ಷಯಃ ||
ತಸ್ಮಾದ್ಜ್ಞಾನಂ ತತೋ ಮೋಕ್ಷೋ ನ ಮೋಕ್ಷಾದ್ವಿದ್ಯತೇ ಪರಂ"

ಈ ಷಟ್ಸ್ಥಲಕ್ರಮಜ್ಞಾನವು ಏತರಿಂ ದೊರಕುವುದು ? ಆದರಿಂದೇನಹನು! ಎಂದರೆ,—ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದ ದೆಸೆಯಿಂದಾವನಿಗೆ ಈಪ್ರಕಾರವಾಗಿ ಷಟ್ಸ್ಥಲಜ್ಞಾನವು ಶ್ರೀಗುರುವಿನ ಅನುಗ್ರಹದ ದೆಸೆಯಿಂದ ಆಗುತ್ತಿಹುದೋ, ಅವನು—ಸಾಕ್ಷಾದೀಶ್ವರನೆಂದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

" ಯಸ್ಯೈವಂ ಕ್ರಮವಿಜ್ಞಾನಂ ದೇಶಿಕಸ್ಯ ಪ್ರಸಾದತಃ ||
ಜನ್ಮಾನ್ತರಕೃತಾತ್ಪುಣ್ಯಾತ್ ಜಾಯತೇಽಸೌ ಸದಾಶಿವಃ "

ಮತ್ತಂ, ಈ ಷಟ್ಸ್ಥಲಂಗಳನ್ನಭ್ಯಾಸಮಾಡುವ ಉಪಾಯದಿಂ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳೆಂಬ ಮುಕ್ತಿತ್ರಯಂಗಳಂ ಮೀರಿದ ಸಾಯುಜ್ಯವೆಂಬ ಮೋಕ್ಷವು--ಶಿವಭಕ್ತರಿಂದ್ಯೈದಲ್ಪಡುತ್ತಿಹುದು. ಇತರ ಕರ್ಮಗಳಲ್ಲಿ ಆಸಕ್ತರಾದ ಜನರಿಂದ್ಯೈದಲ್ಪಡದು. ಎಂಬಲ್ಲಿ ಸಾಕ್ಷಿಯು.—

" ಷಟ್ಸ್ಥಲಾಭ್ಯಾಸಯೋಗೇನ ಮುಕ್ತಿಸ್ಸಾಯುಜ್ಯಲಕ್ಷಣಾ ||
ಪ್ರಾಪ್ಯತೇ ಶಿವಭಕ್ತೈಸ್ತು ನಾನ್ಯಕರ್ಮರತೈರ್ಜನೈಃ "

ಆ ಕಾರಣದಿಂ ಸುಖವನ್ನು ಬಯಸುತಕ್ಕವನೂ, ಅಖಣ್ಡೈಕರಸವಹ ಪರಿಪೂರ್ಣವಸ್ತುವೇ ಸರ್ವವೆಂದು ಪರಿಪೂರ್ಣಚಿತ್ತವುಳ್ಳವನೂ ಆದ ಪುರುಷನು—ಸಕಲ ಪ್ರಪಂಚವನ್ನೂ ಬಿಟ್ಟು, ಷಟ್ಸ್ಥಲಂಗಳಿಂ ಬೋಧಿಸಲ್ಪಟ್ಟ ಸಮ್ಯಗ್ಜ್ಞಾನದಲ್ಲಿ ಚಿತ್ತವೃತ್ತಿಯನಿರಿಸಿ, ಆ ಪರಬ್ರಹ್ಮವಹ ಶಿವನಲ್ಲಿ ಭಕ್ತಿಭಾವನೆಯ ವಿಚಾರವುಳ್ಳವನಹನು. ಎಂಬಲ್ಲಿ ಸಾಕ್ಷಿಯು.—

" ಅತಸ್ಸಮಸ್ತಂ ಪರಿವರ್ಜಯಿತ್ವಾ
ಸುಖಾಭಿಲಾಷೀ ಪರಿಪೂರ್ಣಚೇತಾಃ ||
ಸ್ಥಲೋಕ್ತಸಮ್ಯಕ್ಸ್ಥಿತಿ ಚಿತ್ತವೃತ್ತಿಂ
ನಿವೇಶ್ಯ ಭಕ್ತ್ಯುಪವಿಚಾರವಾಂತಸ್ಸ್ಯಾತ್

ಮತ್ತಂ, ಸತ್ತು ಚಿತ್ತು ಆನನ್ದಗಳಿಂ ತುಂಬಿಕೊಂಡಿಹ ಶಿವಲಿಂಗಸ್ವರೂಪ ದಲ್ಲಿಯೇ ಎರಗಿ, ಮತ್ತೊಂದರಲ್ಲೆರಗದ ಭಕ್ತಿಯು ಸಮ್ಯಗ್ಜ್ಞಾನಕ್ಕೆ ಮೂಲವೆಂ ಬಲ್ಲಿ ಸಾಕ್ಷಿಯು.—

" ಸಮ್ಯಗ್ಜ್ಞಾನಸ್ಯ ಮೂಲಂ ಹಿ ಭಕ್ತಿರವ್ಯಭಿಚಾರಿಣೀ ||
ಸಚ್ಚಿದಾನನ್ದಸಮ್ಪೂರ್ಣೇ ಶಿವಲಿಙ್ಗಸ್ವರೂಪಿಣಿ "

ಈ ಲೋಕದಲ್ಲಿ ಸಂಸಾರವೆಂಬ ಸಮುದ್ರವನ್ನು ದಾಂಟಲಿಚ್ಛೈಸುತ್ತಿರುವ ಮನುಷ್ಯರಿಗೆ—ಸುಖವನ್ನು ಕೊಡುವ ಈ ವೀರಮಾಹೇಶ್ವರರ ಸಂಸರ್ಗವನ್ನು ಹೊರ ತು ಬೇರೊಂದು ಉಪಾಯವಿಲ್ಲವೆಂಬಲ್ಲಿ ಸಾಕ್ಷಿಯು.—

" ಭವಾರ್ಣವಂ ತರ್ತುಮಿಹೇಚ್ಛತಾಂ ನೃಣಾಮ್
ಉಪಾಯ ಏಷಸ್ಸುಲಭಸ್ಸುಖಪ್ರದಃ ||
ನ ವೀರಮಾಹೇಶ್ವರಸಙ್ಗಮಾದೃತೇ
ಜಗತ್ತ್ರಯೇಽನ್ಯೋಽಸ್ತಿ ವಿಚಾರಿತೇ ಸತಿ "

ಆ ಕಾರಣದಿಂ, ಲೋಕದಲ್ಲಿ ಒಬ್ಬನೇ ವಂದಿಸಿಕೊಳ್ಳಲು ಯೋಗ್ಯನೂ, ಜೀವಪರಮೈಕ್ಯನೂ ಆದ ವೀರಮಾಹೇಶ್ವರನನ್ನು—ಯಾವನು ಲೇಸಾಗಿ ಪೂಜಿಸು ವನೋ, ಆತನು—ಸಂಸಾರಬನ್ಧವಿಲ್ಲದ ಚಿತ್ತವುಳ್ಳವನಾಗಿ, ಷಟ್ಸ್ಥಲಂಗಳಲ್ಲಿ ಹು ಟ್ಟಿದ ಆ ಸಮ್ಯಗ್ಜ್ಞಾನವನ್ನು ಐದುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ತಸ್ಮಾದಿಹಪ್ರಾಣ ಶಿವೈಕ್ಯಭಾಜಾಮ್
ಸಮ್ಪೂಜಯೇದ್ಯೋ ಭುವನೈಕವನ್ದ್ಯಮ್ ||
ಸಂಸಾರಸಮ್ಬನ್ಧವಿಹೀನಭಾವಃ
ಸುಜ್ಞಾನಮೇತಿ ಸ್ಥಲಷಟ್ಕಜಂ ತತ್ "

ಆ ಕಾರಣದತ್ತಣಿಂ ಸಮಸ್ತ ಪ್ರಪಂಚಕ್ಕೂ ಉಪಾದಾನಕಾರಣಭೂತನೂ, ಸತ್ಯಜ್ಞಾನಾನನ್ದಸ್ವರೂಪನೂ, ಕಾಲತ್ರಯಾಬಾಧ್ಯನೂ, ತನ್ನ ಮಾಯಾಶಕ್ತಿಯಿಂ ದೀಷಟ್ಸ್ಥಲಂಗಳೆಂಬಾರುಭೇದಂಗಳನಂಗೀಕರಿಸಿದವನೂ, ಪರಾತ್ಪರನೂ ಆಗಿರುತ್ತಾ ನೆಯೋ, ಆ ಪರಬ್ರಹ್ಮನಾದ ಪರಶಿವನನ್ನು ಚೆನ್ನಾಗಿ ತಿಳಿದಾತನು—ಜನನ ಮರ ಣಾತ್ಮಕಂಗಳಾದ ಈ ಸಂಸಾರ ದುಃಖಂಗಳಂ ಪಡೆಯುತಕ್ಕವನಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ತಸ್ಮಾತ್ಪರಬ್ರಹ್ಮ ಸುಖಸ್ವರೂಪಂ
ಸ್ವಮಾಯಯಾ ಷಟ್ಸ್ಥಲಭೇದಭಿನ್ನಮ್ ||

ಸಚ್ಚಿನ್ಮಯಂ ಶಙ್ಕರಮಕ್ಷರಂ ತತ್
ಯೋ ವೇದ ನಾಯಾತಿ ಪುನರ್ಭವಂಸಃ ''

ಈ ಪ್ರಕಾರದಿಂ ದನುಭವಪ್ರಮಾಣದಿಂ ತನುತ್ರಯವಿಲಕ್ಷಣಮಪ್ಪ ಪರಮಾತ್ಮಸ್ವರೂಪವಹ ಷಟ್ಸ್ಥಲಜ್ಞಾನವು ಯಾವನಿಗೆ ಶ್ರೀ ಗುರೂಪದೇಶದಿಂದಲೂ, ಸ್ವಾನುಭವದಿಂದಲೂ ಬೆಳಗುತ್ತಿರ್ಪುದೋ, ಆತನು—ಸರ್ವಜ್ಞನೆಂದೆನಿಸಿಕೊಳ್ಳುವನು ಎಂಬಲ್ಲಿ ಸಾಕ್ಷಿಯು.—

'' ಏವಂ ಷಟ್ಸ್ಥಲವಿಜ್ಞಾನಂ ಪ್ರತ್ಯಗ್ರೂಪಂ ಪ್ರಮಾಣತಃ ||
ಗುರೂಕ್ತ್ಯಾ ಸ್ವಾನುಭೂತ್ಯಾ ಚ ಯಸ್ಯ ಭಾತಿ ಸ ಸರ್ವವಿತ್ ''

ಕ್ರಿಮಿಕೀಟಪತಂಗಜಾತಿಗಳಿಂ ಪಶುಗಳಧಿಕವು, ಆ ಪಶುಗಳಿಂ ಮನುಷ್ಯಾಧಿಕರು, ಆ ಮನುಷ್ಯರಲ್ಲಿ ದ್ವಿಜರಧಿಕರು, ಆ ದ್ವಿಜರಲ್ಲಿ ವಿಪ್ರರಧಿಕರು, ಆ ವಿಪ್ರರಲ್ಲಿ ಕ್ರತುಬುದ್ಧಿಗಳಧಿಕರು, ಆ ಕ್ರತುಬುದ್ಧಿಗಳಲ್ಲಿ ಯಜ್ಞಕರ್ತರಧಿಕರು, ಆ ಯಜ್ಞಕರ್ತೃಗಳಿಂದ ಸನ್ನ್ಯಾಸಿಗಳಧಿಕರು, ಆ ಸನ್ನ್ಯಾಸಿಗಳಿಂ ಜ್ಞಾನಿಗಳಧಿಕರು, ಆ ಜ್ಞಾನಿಗಳಲ್ಲಿ ಶಿವಾರ್ಚಕರಧಿಕರು, ಆ ಶಿವಾರ್ಚಕರಲ್ಲಿ ಲಿಂಗಾಂಗಸಂಗಿಗಳಧಿಕರು, ಆ ಲಿಂಗಾಂಗಸಂಗಿಗಳಲ್ಲಿ ಷಟ್ಸ್ಥಲಜ್ಞಾನಸಂಪನ್ನರಧಿಕರು, ಆ ಷಟ್ಸ್ಥಲಜ್ಞಾನಿಗಳಿಗೆ ಎಲ್ಲಿಯೂ ಸಮಾನವಿಲ್ಲವಾಗಿ, ಆ ಷಟ್ಸ್ಥಲಜ್ಞಾನಿಗಳು—ಸಂಸಾರಸಾಗರವ ದಾಂಟಲಿಚ್ಛೆಯುಳ್ಳವರಿಂದ ಸರ್ವಕಾಲದಲ್ಲಿಯೂ ವಂದ್ಯರೂ ಪೂಜ್ಯರೂ ಆಗುತ್ತಾರೆ. ಎಲೈ ಷಣ್ಮುಖನೇ ! ಬಹಳವಾಗಿ ಹೇಳಿದ್ದರಿಂದೇನು ? ಆ ಷಟ್ಸ್ಥಲಜ್ಞಾನಸಂಪನ್ನನೇ ನಾನು ನಾನೇ ಆತನು ಈ ವಿಷಯದಲ್ಲಿ ಸಂಶಯವಿಲ್ಲವು. ಎಂಬಲ್ಲಿ ಸಾಕ್ಷಿಯು.—

'' ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಽಧಿಕಾಃ ||
ಪಶುಭ್ಯೋಽಪಿ ನರಾಶ್ಶ್ರೇಷ್ಠಾಸ್ತೇಷು ಶ್ರೇಷ್ಠಾ ದ್ವಿಜಾತಯಃ ||
ದ್ವಿಜಾತಿಷ್ವಧಿಕಾವಿಪ್ರಾ ವಿಪ್ರೇಷು ಕ್ರತುಬುದ್ಧಯಃ ||
ಕ್ರತುಬುದ್ಧಿಷು ಕರ್ತಾರಸ್ತೇಭ್ಯಸ್ಸನ್ನ್ಯಾಸಿನೋಽಧಿಕಾಃ ||
ತೇಭ್ಯೋ ವಿಜ್ಞಾನಿನಶ್ಶ್ರೇಷ್ಠಾಸ್ತೇಷುಶಙ್ಕರಪೂಜಕಾಃ ||
ತೇಷು ಶ್ರೇಷ್ಠಾ ಮಹಾಭಾಗಾ ಮಮ ಲಿಙ್ಗಾಙ್ಗಸಙ್ಗಿನಃ ||
ಲಿಙ್ಗಾಙ್ಗಸಙ್ಗಿಷ್ವಧಿಕಷ್ಷಟ್ಸ್ಥಲಜ್ಞಾನವಾನ್ಸುಮಾನ್ ||
ತಸ್ಮಾದಪ್ಯಧಿಕೋ ನಾಸ್ತಿ ತ್ರಿಷು ಲೋಕೇಷು ಸರ್ವದಾ ||
ಸ ವನ್ದ್ಯಸ್ಸರ್ವದಾ ಪೂಜ್ಯಸ್ಸಂಸಾರವಿಜಿಗೀಷುಭಿಃ ||
ಬಹುನೋಕ್ತೇನ ಕಿಂವತ್ಸ! ಸಏವಾಹಂ ನ ಸಂಶಯಃ ''

ಯಾವ ಮಹಾತ್ಮರು—ಷಟ್ಸ್ಥಲಂಗಳಲ್ಲಿ ಒಪ್ಪುತ್ತಿರುವರೋ, ಅವರೇ—ಲೋಕದಲ್ಲಿ ವನ್ದ್ಯರು. ಅವರು—ಜಯಶಾಲಿಗಳಾದ ಇನ್ದ್ರಿಯಗಳಿಗೆ ಶತ್ರುಗಳು. ಯಾವ ಷಟ್ಸ್ಥಲಬ್ರಹ್ಮಿಗಳಲ್ಲಿ ಸಾಮ್ರಾಜ್ಯವನುಳ್ಳ ಪ್ರಭುವೂ, ಸ್ವರ್ಗಾಧಿಪತಿಯಾದ ಇನ್ದ್ರನೂ ತೃಣವಾಗುತ್ತಿಹನೋ, ಆ ಷಟ್ಸ್ಥಲಬ್ರಹ್ಮಿಗಳೆಂಬ ಶಿವಭಕ್ತರು—ಶಿವಸಮ್ಬನ್ಧವಹ ಆ ಪದವಿಯನ್ನೈದುತ್ತಿಹರು. ಎಂಬಲ್ಲಿ ಸಾಕ್ಷಿಯು.—

"ಷಟ್ಸು ಸ್ಥಲೇಷು ವಿಜಯನ್ತಿ ಹಿ ಯೇ ಮಹಾನ್ತೋ
ವನ್ದ್ಯಾಸ್ತ ಏವ ವಿಜಯಿನ್ದ್ರಿಯಶತ್ರವಸ್ತೇ ||
ಸಮ್ರಾಟ್ಸ್ವರಾಡಪಿ ಚ ಯತ್ರ ತೃಣಾಯತೇ ತತ್
ಶೈವಂ ಪದಂ ಜಗತಿ ತೇ ಸಮವಾಪ್ನುವನ್ತಿ"

ಕರಕಮಲವೆಂಬ ಸಿಹ್ಮಾಸನದಲ್ಲಿರುವ ಇಷ್ಟಲಿಙ್ಗವನ್ನರ್ಚಿಸುವ ಯಾವನು—ಈಪ್ರಕಾರದಲ್ಲಿ ಶಿವನ ಪದವಂ ಹೊಂದುವುದಕ್ಕೆ ಮುಖ್ಯಕಾರಣವಾದ ಷಟ್ಸ್ಥಲನಿರ್ಣಯವನ್ನು ಯಾವಾಗಲೂ ಅಭ್ಯಾಸಮಾಡುವನೋ-ಅವನು ಜ್ಞಾನಿಯು, ಪುರಾತನನು ಮಹಾ ಶಿವಭಕ್ತರೆಂಬ ಮಹಾಮಾಹೇಶ್ವರರಲ್ಲಿ ಉತ್ತಮನು ಎಂದೆನಿಸಿಕೊಳ್ಳುವನು. ಆತನೊಡನೆ ಸಮಾನನಹ ಮನುಷ್ಯನೂ, ದೇವತೆಯೂ ಮೂರುಲೋಕಗಳಲ್ಲಿಯೂ ಇಲ್ಲವು. ಎಂಬಲ್ಲಿ ಸಾಕ್ಷಿಯು.—

"ಏವಂ ಷಟ್ಸ್ಥಲನಿರ್ಣಯಂ ಶಿವಪದಪ್ರಾಪ್ತ್ಯೈಕಹೇತುಂ ಸದಾ
ಯಸ್ಸೇವೇತ ಕರಾಬ್ಜಪೀಠನಿಹಿತ ಶ್ರೀಕಣ್ಠಲಿಙ್ಗಾರ್ಚಕಃ ||
ಸ ಜ್ಞಾನೀ ಸ ಪುರಾತನಸ್ಸಹಿ ಮಹಾಮಾಹೇಶ್ವರೇಷೂತ್ತಮಃ
ಮರ್ತ್ಯಸ್ತೇನ ಜಗತ್ತ್ರಯೇ ನ ಸದೃಶೋ ವಿದ್ಯೇತ ದೇವೋಪಿ ವಾ"

ಯಾವನ ನಿರ್ಮಲವಹ ಬುದ್ಧಿಯೆಂಬ ಕನ್ನಡಿಯಲ್ಲಿ ಈ ಪ್ರಕಾರವಾದ ಷಟ್ಸ್ಥಲಜ್ಞಾನದ ಆಧಿಕ್ಯವಹ ಸಮ್ಬನ್ಧವು ದೃಢವಾಗಿ ಬೆಳಗುತ್ತಿಹುದೋ, ಆತನೇ ವೀರಮಾಹೇಶ್ವರನೆಂದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

"ಯಸ್ಯೈವಂ ಷಟ್ಸ್ಥಲಜ್ಞಾನ ಸಾಮಗ್ರೀಕಲನಾದೃಢಾ ||
ಭಾತಿ ಧೀದರ್ಪಣೇ ಸ್ವಚ್ಛೇ ಸವೈಮಾಹೇಶ್ವರೋಜನಃ"

ಈ ಪ್ರಕಾರನಾದ ಷಟ್ಸ್ಥಲಜ್ಞಾನಿಯು—ಅತ್ಯಂತೋಗ್ರವಾಗಿಯೂ ಅಪಾರವಾಗಿಯೂ, ಸಹಿಸಲಶಕ್ಯಗಳಾದ ತೆರೆಗಳುಳ್ಳುದಾಗಿಯೂ ಇರುವ ಸಂಸಾರವೆಂಬ ಸಮುದ್ರವನ್ನು ದಾಂಟಿ; ಪರಮಾತ್ಮನಾದ ನನ್ನನ್ನು ಹೊಂದುತ್ತಾನೆ. ಪುನಃ ಜನ್ಮವನ್ನೈತ್ತನು. ಆ ಕಾರಣದಿಂದ ಈ ವೀರಮಾಹೇಶ್ವರನು ಶಿವನಿಗೂ ಸರ್ವಜ್ಞನಾದ

ನನ್ನಿಂದ ನುಡಿಯಲಶಕ್ಯವು. ಎಲೈ ಷಣ್ಮುಖನೆ! ಮಿಕ್ಕಾದ ಬ್ರಹ್ಮ ಮೊದಲಾದ ರಿಂದ ನುಡಿಯಲು ಶಕ್ಯವಲ್ಲವೆಂದು ಹೇಳುವುದೇನು? ಬಹಳವಾಗಿ ನುಡಿದುದ ದೇನು? ನಾನೇ ಅವನು. ಈ ವಿಷಯದಲ್ಲಿ ಸಂಶಯವಿಲ್ಲವೆಂಬಲ್ಲಿ ಸಾಕ್ಷಿಯು.—

"ಸ ಭವಾರ್ಣವ ಮತ್ಯುಗ್ರಂ ದುಷ್ಪಾರಂ ದುಸ್ತರಜ್ಞಿಕಮ್ ||
ತೀರ್ತ್ವಾ ಮಾಂ ಪರಮಾತ್ಮಾನ ಮೇತಿ ನಾವರ್ತತೇ ಪುನಃ ||
ತಸ್ಮಾನ್ಮಾಹೇಶ್ವರಸ್ಯೈಷಾ ನಿಷ್ಠಾ ವಕ್ತುಂ ನ ಶಕ್ಯತೇ ||
ಮಯಾ ಸರ್ವವಿದಾ ವತ್ಸ! ಕಿಮುತಾನ್ಯೈರಜಾದಿಭಿಃ ||
ಬಹುನೋಕ್ತೇನ ಕಿಂ ಸಾಕ್ಷಾತ್ಸಏವಾಹಂ ನ ಸಂಶಯಃ"

ಮತ್ತಂ, ಎಲೈ ಷಣ್ಮುಖನೇ! ನನ್ನಲ್ಲಿ ಭಕ್ತಿಯಿಲ್ಲದವರಿಗೂ ದುರ್ವರ್ತನೆ ಸುಳ್ಳವರಿಗೂ ಅತ್ಯುತ್ತಮವಹ ಈ ಷಟ್ಸ್ಥಲಜ್ಞಾನವು ಅತ್ಯಂತ ದುರ್ಲಭವಾ ದದ್ದು. ಎಂಬಲ್ಲಿ ಸಾಕ್ಷಿಯು.—

"ಸುದುರ್ಲಭಮಿದಂ ಜ್ಞಾನಂ ನರಾಣಾಮುತ್ತಮೋತ್ತಮಮ್ ||
ಮದ್ಭಕ್ತಿರಹಿತಾನಾಂ ಚ ದುರ್ವೃತ್ತಾನಾಂ ಷಡಾನನ!"

ತನ್ನ ಧ್ಯಾನವೆಂಬ ಅಮೃತದಿಂ ತೃಪ್ತರಾಗಿಯೂ, ಸದಾಚಾರಂಗಳಲ್ಲಿ ವ ಸುವವರಾಗಿಯೂ ಇರತಕ್ಕವರಿಗೆ—ಷಟ್ಸ್ಥಲಂಗಳಲ್ಲಿ ಉತ್ಕೃಷ್ಟವಾದ ಜ್ಞಾನ ಉಂಟಾಗುತ್ತದೆ. ಎಂಬಲ್ಲಿ ಸಾಕ್ಷಿಯು.—

"ಮದ್ಧ್ಯಾನಾಮೃತತೃಪ್ತಾನಾಂ ಸದಾಚಾರಾನುವರ್ತಿನಾಂ ||
ಜಾಯತೇ ತತ್ಪರಂ ಜ್ಞಾನಂ ಸ್ಥಲಷಟ್ಕೋದ್ಭವಂ ನೃಣಾಮ್"

ಆ ಕಾರಣದಿಂ, ಶ್ರೀ ವೀರಶೈವಾಗಮೋಕ್ತಮಪ್ಪ ಸದಾಚಾರಂಗಳಲ್ಲಿ ಆ ಕ್ತನೂ, ಚಿತ್ತಸಮಾಧಾನ ಮುಳ್ಳವನೂ, ಆಗಿರತಕ್ಕವನು—ಶಿವಸ್ವರೂಪವಹ ಪ ಮಾರ್ಥಮಾದ ಷಟ್ಸ್ಥಲವನ್ನು ಏಕಚಿತ್ತದಿಂದ ಆದರದಿಂದ ಯಾವಾಗಲೂ ಅಭ್ಯಾ ಸವಂ ಮಾಡಬೇಕು. ಎಂಬಲ್ಲಿ ಸಾಕ್ಷಿಯು.—

"ಅತಸ್ಸದಾಚಾರರತಸ್ಸ ಧೀಮಾನ್
ಶಿವಸ್ಯ ಲಿಙ್ಗಾರ್ಚನತತ್ಪರೋಜನಃ ||
ಶಿವಸ್ವರೂಪಂ ಪರಮಾರ್ಥಮಾದರಾತ್
ಸದಾಽಭ್ಯಸೇತ್ಷಟ್ಸ್ಥಲಮೇಕಭಾವತಃ"

ಸಮಸ್ತಶಾಸ್ತ್ರಗಳಲ್ಲೂ ರಹಸ್ಯವಹ ಸಮಸ್ತವಾದ ಷಟ್ಸ್ಥಲ ನಿರ್ಣಯವ ನವು—ನಿನಗೆ ಪ್ರೀತಿಪೂರ್ವಕವಾಗಿ ನನ್ನಿಂದ ಸಂಗ್ರಹವಾಗಿ ಹೇಳಲ್ಪಟ್ಟಿತು, ಆ

ರಣದಿಂದ ನೀನು ಈ ಪ್ರಕಾರದಲ್ಲಿ ತಿಳಿದು, ಸರ್ವದಾ ಷಟ್ಸ್ಥಲ ಜ್ಞಾನವುಳ್ಳವನಾಗು. ಎಂಬಲ್ಲಿ ಸಾಕ್ಷಿಯು.—

" ಸರ್ವಮುಕ್ತಂ ಸಮಾಸೇನ ಸ್ಥಲನಿರ್ಣಯವೇದನಮ್ ||
ಗೋಪ್ಯಂ ಸಮಸ್ತಶಾಸ್ತ್ರೇಷು ತವ ಸ್ನೇಹಾನ್ಮಯೋದಿತಮ್ ||
ತಸ್ಮಾದೇವಂ ವಿದಿತ್ವಾ ತ್ವಂ ಷಟ್ಸ್ಥಲಜ್ಞಾನವಾನ್ಭವ "

ಎಲೈ ಸ್ಕನ್ದನೇ! ಯಾವಾಗಲೂ ನನ್ನ ಪ್ರೇಮಕ್ಕೆ ಸ್ಥಾನವಹ ನಿನಗೆ ಸಮಸ್ತ ವೇದಂಗಳ ಸಾರಮಾದ, ಸಮಸ್ತಶಾಸ್ತ್ರಂಗಳಲ್ಲಿ ಪ್ರಸಿದ್ಧಮಾದ, ಸಂಸಾರವೆಂಬ ಅಡವಿಗೆ ಕೊಡಲಿಯಾದ, ಪರಮಾನನ್ದವಂ ಹೊಂದುವುದಕ್ಕೆ ಮೂಲಕಾರಣಮಾದ ಉತ್ತಮವಾದ ಹೆಸರುಳ್ಳುದಾದ ಸಮಸ್ತ ಷಟ್ಸ್ಥಲ ಜ್ಞಾನವು—ನನ್ನಿಂದ ಹೇಳಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.

" ಸಕಲನಿಗಮಸಾರಂ ಷಟ್ಸ್ಥಲಜ್ಞಾನಮೇತತ್
ಭವವಿಪಿನ ಕುಠಾರಂ ಸರ್ವತನ್ತ್ರ ಪ್ರಸಿದ್ಧಮ್ ||
ಪರಮಸುಖಸಮಾವಾಪ್ತ್ಯೈಕ ಹೇತೂತ್ತಮಾಖ್ಯಮ್
ತವ ಕಥಿತಮಶೇಷಂ ಸರ್ವದಾ ಪ್ರೇಮಭೂಮ್ನೇ "

ಎಲೈ ಷಣ್ಮುಖನೇ! ಶಿವಾಚಾರಗಳೊಡನೆ ಕೂಡಿದ, ಮತ್ತಂ, ಗೆಲ್ಲಲ್ಪಟ್ಟ ಕಾಮರಾಗದ್ವೇಷಲೋಭೇನ್ದ್ರಿಯಂಗಳನುಳ್ಳ, ಸದ್ಗುಣ ಸಮೂಹಕ್ಕೆ ಸ್ಥಾನವಹ ಶ್ರೀಗುರುವಿನ ಚರಣಕಮಲಧ್ಯಾನದೊಡನೆ ಕೂಡಿದ, ಪ್ರಾಣಲಿಂಗೈಕ್ಯವನ್ನು ಭಜಿಸಿಕೊಂಡಿರುವ ಮಹಾತ್ಮನಿಗೋಸ್ಕರ ಈ ಎಲ್ಲವನ್ನೂ ಹೇಳು. ಎಂಬಲ್ಲಿ ಸಾಕ್ಷಿಯು.

" ತ್ವಮಪಿ ಕಥಯ ಶೈವಾಚಾರಯುಕ್ತಾಯ ಸರ್ವಮ್
ವಿಜಿತಮದನರಾಗದ್ವೇಷಲೋಭೇನ್ದ್ರಿಯಾಯ ||
ಗುಣಗಣನಿಲಯಾಯ ಪ್ರಾಣಲಿಂಗೈಕ್ಯಭಾಜೇ
ಗುರುಚರಣ ಸರೋಜಧ್ಯಾನಯುಕ್ತಾಯ ವತ್ಸ! "

ಸದಾಚಾರ ರಹಿತನೂ, ಸಂಸಾರದಲ್ಲಿ ವಿರಕ್ತಿಯಿಲ್ಲದವನೂ, ಜಗದೀಶ್ವರನಾದ ನನ್ನನ್ನು ನಿರಾಕರಿಸುವವನೂ, ಲಿಂಗಧಾರಣವಿಲ್ಲದವನೂ ಆದವನಿಗೋಸ್ಕರ ನೀನು—ಒಂದು ಬಾರಿಯೂ ನುಡಿಯದಿರು. ಎಂಬಲ್ಲಿ ಸಾಕ್ಷಿಯು.—

" ಅಶಿಷ್ಟಾಯಾವಿರಕ್ತಾಯ ದೇವತಾ ದೂಷಕಾಯ ಚ ||
ಲಿಂಗಧಾರಣ ದೂರಾಯ ಮಾವಾದೀಸ್ತ್ವಂ ಕದಾಚನ "

ಅನಂತರದಲ್ಲಿ ಸೂತಮುನಿವಾಕ್ಯವು.

ಸುಖವನ್ನುಂಟುಮಾಡುವ ಪರಮೇಶ್ವರನು—ಹವಣಿಸಲ್ಪಾರದ ತೇಜಸ್ಸು
ಕುಮಾರಸ್ವಾಮಿಗೋಸ್ಕರ ಹೀಗೆಂದು ನುಡಿದು, ಪಾರ್ವತೀದೇವಿಯ ಮುಖಕಮ
ದಲ್ಲಿರಿಸಲ್ಪಟ್ಟ ನಯನಗಳುಳ್ಳವನಾಗಿ ಸುಮ್ಮನಿದ್ದನು. ಎಂಬಲ್ಲಿ ಸಾಕ್ಷಿಯು.—

"ಇತ್ಯುಕ್ತ್ವಾ ಶಙ್ಕರಃ ಕ್ರೌಞ್ಚದಾರಣಾಯಾಮಿತೌಜಸೇ ||
ಗೌರೀಮುಖಾಬ್ಜವಿನ್ಯಸ್ತದೃಷ್ಟಿಸ್ತೂಷ್ಣೀಂ ಬಭೂವ ಸಃ"

ಅನನ್ತರದಲ್ಲಿ ಕುಮಾರಸ್ವಾಮಿಯು—ಶಿವನ ಮುಖದಿಂ ಹೇಳಲ್ಪಟ್ಟ ಷಟ್ಸ್ಥ
ಲದ ನಿರ್ಣಯವನ್ನು ಕೇಳಿ ಭಕ್ತಿಯಿಂ ಸಾಷ್ಟಾಂಗ ನಮಸ್ಕಾರವಂ ಮಾಡಿ ಪರವಶ
ನಾದನು. ಎಂಬಲ್ಲಿ ಸಾಕ್ಷಿಯು.—

"ಶ್ರುತ್ವಾ ಶಿವಮುಖೋದ್ಗೀತಂ ಸ್ಕನ್ದಷ್ಷಟ್ಸ್ಥಲನಿರ್ಣಯಮ್ ||
ಪ್ರಣಮ್ಯ ದಣ್ಡವದ್ಭೂಮೌ ಭಕ್ತ್ಯಾ ಪರವಶೋಽಭವತ್"

ಅನನ್ತರದಲ್ಲಿ ಕುಮಾರಸ್ವಾಮಿಯು—ಶಿವನಲ್ಲಿ ಸ್ವಲ್ಪಹೊತ್ತು ಪರವಶನಾ
ದ್ದು; ಪಡೆಯಲ್ಪಟ್ಟ ಎಚ್ಚರಿಕೆಯುಳ್ಳವನಾಗಿ, ಸುಖವನ್ನುಂಟುಮಾಡುವ ಶಿವನನ್ನು
ಸ್ತುತಿಸಿದನು. ಎಂಬಲ್ಲಿ ಸಾಕ್ಷಿಯು.—

"ತತಃ ಪರವಶೋ ಭೂತ್ವಾ ಕಞ್ಚಿತ್ಕಾಲಂ ಮಹೇಶ್ವರೇ ||
ಲಬ್ಧಸಂಜ್ಞೋ ಮಹಾದೇವಂ ಸ್ಕನ್ದಸ್ತುಷ್ಟಾವಶಙ್ಕರಮ್"

ಷಟ್ಸ್ಥಲಬ್ರಹ್ಮಸ್ವರೂಪನೂ, ಯಾವಾಗಲೂ ಆನನ್ದಸ್ವರೂಪನೂ, ಸ
ಗ್ಜ್ಞಾನವಂ ಕೊಡುತ್ತಿರುವವನೂ, ಉಮಾದೇವಿಯಿಂ ಸಹಿತನೂ ಆದ ನಿನಗೋಸ್ಕ
ರ ಸಮಸ್ಕಾರವು ||೧|| ಕಪ್ಪುಗೊರಳನೂ, ನಿತ್ಯನೂ, ಮಾಯಾಪ್ರಪಂಚವಿಲ್ಲದ
ನೂ, ಸುಪಿಕ್ಕೆ ಕಾರಣ ಭೂತನೂ, ನಿರ್ಲೇಪನೂ, ಸಂಸಾರ ಕಾರಣನೂ, ತ್ರಿಲೋಚ
ನನೂ, ಆದ ನಿನಗೋಸ್ಕರ ಸಮಸ್ಕಾರವು ||೨|| ಜಟಾ ಮಕುಟದಲ್ಲಿ ಗಂಗೆಯನ್ನು
ಧರಿಸಿದವನೂ, ವಿಷಮನೇತ್ರಗಳುಳ್ಳವನೂ, ಚನ್ದ್ರಕಲಾಭರಣನೂ, ಸರ್ವಜ್ಞನೂ
ಸರ್ವವ್ಯಾಪಕನೂ, ಪ್ರಪಞ್ಚವೆಲ್ಲವೂ ತಾನೆಯಾದವನೂ, ಸರ್ವಾಶ್ರಯನೂ ಶಿವನೂ
ಆದ ಈ ನಿನ್ನನ್ನು ನಮಿಸುತ್ತೇನೆ ||೩|| ಸಮಸ್ತಲೋಕಂಗಳಿಗಾಧಾರನೂ, ತನ
ಯಾವ ಆಧಾರವೂ ಇಲ್ಲದವನೂ, ಮಾಯಾ ಪ್ರಪಂಚದ ವಿಕಾರವಿಲ್ಲದವನೂ,
ಗಳಿಲ್ಲದ ಆನನ್ದ ಸಮುದ್ರನೂ, ನಿತ್ಯನೂ, ಪರಮೇಶ್ವರನೂ ಆದ ನಿನ್ನನ್ನು ನಮಿಸು
ತ್ತೇನೆ ||೪|| ನಾನಾಕಲೆಗಳಿಗಾಧಾರನೂ, ನಾದ ಬಿನ್ದು ಕಲೆಗಳನ್ನು ಮೀರಿದವನೂ
ಯಮನಿಗೆ ಯಮನೂ, ಜಟಾಮಕುಟವುಳ್ಳವನೂ, ಕರ್ಮ ರಹಿತನೂ, ನಿರ್ಮಲನೂ
ಕೇಡಿಲ್ಲದವನೂ, [illegible] ಭೂತಗಳಿಗೆ ಒಡೆಯನೂ ಪರಮಾತ್ಮನೂ ಆದ ನಿನ್ನನ್ನು

ನಮಿಸುತ್ತೇನೆ ||೫|| ಬ್ರಹ್ಮ ವಿಷ್ಣು ರುದ್ರರಿಗೂ ಕಾರಣನೂ, ಕಾರಣವಂ ಮೀರಿದವನೂ, ಸರ್ಪಗಳಿಂದಲಂಕರಿಸಲ್ಪಟ್ಟ ಸರ್ವಾಙ್ಗವುಳ್ಳವನೂ, ಸಕಲಲೋಕಂಗಳಿಗೊಡೆಯನೂ ಆದ ನಿನ್ನಂ ನಮಿಸುತ್ತೇನೆ ||೬|| ನಾದ ಬಿನ್ದು ಕಳೆಗಳಿಲ್ಲದವನೂ, ಶುದ್ಧನೂ, ಸಚ್ಚಿದಾನನ್ದಸ್ವರೂಪನೂ, ಭಕ್ತರನ್ನು ಸಂಸಾರಪಾಶದತ್ತಣಿಂ ಬಿಡಿಸುವವನೂ, ಪಾರ್ವತೀದೇವಿಯಿಂ ಸಹಿತನೂ, ವಿಶ್ವರೂಪನೂ, ಬೇರೊಬ್ಬ ಒಡೆಯನಿಲ್ಲದವನೂ, ಯಾವಾಗಲೂ ಮಂಗಳಸ್ವರೂಪನೂ ಆದ ನಿನ್ನನ್ನು ನಮಿಸುತ್ತೇನೆ ||೭|| ಅರಿಯಲ್ಬಾರದವನೂ, ಅರಿಯಲ್ತಕ್ಕವನೂ, ಸತ್ಸ್ವರೂಪಕ್ಕೆ ಕಾರಣನೂ, ಗಜಾಸುರಚರ್ಮಾಮ್ಬರಧಾರಿಯೂ, ಮಂಗಳಸ್ವರೂಪನೂ, ಬ್ರಹ್ಮ ವಿಷ್ಣು ರುದ್ರಾದಿಗಳಿಗಾದ್ಯನೂ, ಉಮಾಪತಿಯೂ ಆದ ನಿನ್ನನ್ನು ನಮಿಸುತ್ತೇನೆ ||೮|| ದೇವತೆಗಳಿಂ ಪೂಜಿಸಲ್ಪಟ್ಟ ಚರಣಕಮಲಗಳುಳ್ಳವನೂ, ಗೀತ ನೃತ್ಯಂಗಳಲ್ಲಿ ಪ್ರೀತಿಯುಳ್ಳವನೂ, ಶ್ರೀಮತ್ಕೈಲಾಸದೊಳ್ ಶಯನವಂ ಮಾಡುತ್ತಿರುವವನೂ, ಬೃಹಸ್ಪತ್ಯಾಚಾರ್ಯನ ಸ್ತೋತ್ರಕ್ಕೆ ಪಾತ್ರನೂ, ನಾನಾಜೀವರ ಹೃದಯದಲ್ಲಿರ್ದು ಸರ್ವಕ್ಕೂ ಸಾಕ್ಷಿಯಾದವನೂ, ಆದ ನಿನ್ನನ್ನು ನಮಸ್ಕರಿಸುತ್ತೇನೆ ||೯|| ಪಾರ್ವತೀದೇವಿಯ ಕುಚಕಮಲಗಳ ಸೌಂದರ್ಯವೆಂಬ ಪುಷ್ಪರಸದಿಂ ಮದಿಸಿದ ನಯನಗಳೆಂಬ ತುಂಬಿಗಳುಳ್ಳವನೂ, ವಿಶ್ವರೂಪನೂ, ಸ್ವಭಾವದಿಂ ನಿರ್ಮಲವಾದ ತೇಜಸ್ಸುಳ್ಳವನೂ ಆದ ನಿನಗೋಸ್ಕರ ನಮಸ್ಕಾರವು ||೧೦|| ಆವನ ಪ್ರಸನ್ನತೆಯಿಂ ಯೋಗೀಶ್ವರರು ಜ್ಞಾನಿಗಳಾಗಿ ಪರಮಪದವನ್ನೈದುವರೋ, ಎಲೈ ಬ್ರಹ್ಮವಿಷ್ಣುರುದ್ರೇನ್ದ್ರಾದಿಗಳಿಗೆ ಒಡೆಯನಾದ ಶಿವನೇ! ಸರ್ವಮಙ್ಗಳಗಳಿಗೆ ಕಾರಣನಾದ ಆ ನಿನ್ನಂ ಐದುತ್ತಿದ್ದೇನೆ ||೧೧|| ಯಾವ ಪರಮೇಶ್ವರನ ದೆಸೆಯಿಂ ಈ ಚರಾಚರ ಪ್ರಪಂಚವು ಹುಟ್ಟುತ್ತಿಹುದೋ, ಯಾವ ಶಿವನಲ್ಲಿ ಈ ಚರಾಚರ ಪ್ರಪಂಚವು ಇರುತ್ತಿಹುದೋ, ಆವ ಶಿವನಲ್ಲಿ ಲೀನವಾಗುತ್ತಿಹುದೋ, ಆ ಬ್ರಹ್ಮ ವಿಷ್ಣು ರುದ್ರರಂ ಮೀರಿದ ಮಹದೈಶ್ವರ್ಯಮುಳ್ಳ ಪರಶಿವನನ್ನು ಯಾವಾಗಲೂ ಹೊಂದುತ್ತೇನೆ ||೧೨|| ಈ ಪ್ರಕಾರದಲ್ಲಿ ಕುಮಾರಸ್ವಾಮಿಯು ಸಾಕ್ಷಾತ್ಪರಶಿವಸ್ವಾಮಿಯನ್ನು ಸ್ತುತಿಸಿದನೆಂಬಲ್ಲಿ ಸಾಕ್ಷಿಯು.—

" ನಮೋಸ್ತು ತುಭ್ಯಂ ಸೋಮಾಯ ಷಟ್ಸ್ಥಲಬ್ರಹ್ಮರೂಪಿಣೇ ||
ಸದಾನನ್ದಸ್ವರೂಪಾಯ ಸಮ್ಯಗ್ಜ್ಞಾನಪ್ರದಾಯಿನೇ ||೧||
ನೀಲಕಣ್ಠಾಯ ನಿತ್ಯಾಯ ನಿರ್ವಿಕಾರಾಯ ಶಮ್ಭವೇ ||
ನಿರಞ್ಜನಾಯ ಶರ್ವಾಯ ತ್ರ್ಯಮ್ಬಕಾಯ ನಮೋನಮಃ ||೨||

ಗಜಾಙ್ಗಧರಂ ವಿರೂಪಾಕ್ಷಂ ಚನ್ದ್ರಲೇಖಾವತಂಸಕಮ್ ||
ಸರ್ವಜ್ಞಂ ಸರ್ವಗಂ ಸರ್ವಂ ವನ್ದೇ ಸರ್ವಾಶ್ರಯಂ ಶಿವಮ್
ಆಧಾರಂ ಸರ್ವಲೋಕಾನಾ ಮನಾಧಾರಮವಿಕ್ರಿಯಮ್ ||
ನಿಸ್ತರಙ್ಗಸುಖಾಮ್ಭೋಧಿಂ ನಮಾಮೀಶಾನಮವ್ಯಯಮ್
ಕಲಾಧರಂ ಕಲಾತೀತಂ ಕಾಲಕಾಲಂ ಕಪರ್ದಿನಮ್ ||
ಕರ್ಮಾದಿರಹಿತಂ ಶುದ್ಧಂ ವನ್ದೇ ಭೂತೇಶಮಕ್ಷತಮ್
ಬ್ರಹ್ಮವಿಷ್ಣುರುದ್ರಾಣಾಂ ಚ ಕಾರಣಂ ಕಾರಣಾತಿಗಮ್ ||
ನಾಗಾಲಙ್ಕೃತಸರ್ವಾಙ್ಗಂ ನಮಾಮಿ ಸಕಲೇಶ್ವರಮ್
ನಿಷ್ಕಲಂ ನಿರ್ಮಲಂ ಸಚ್ಚಿನ್ಮಯಂ ಸಂಸಾರಮೋಚಕಮ್ ||
ಸಾಮ್ಬಂ ಸರ್ವಾತ್ಮಕಂ ವನ್ದೇ ಸದಾಶಿವ ಮನೀಶ್ವರಮ್
ಅವ್ಯಕ್ತವ್ಯಕ್ತಸದ್ಭಾವಕಾರಣಂ ಕೃತ್ತಿವಾಸಸಮ್ ||
ಕಲ್ಯಾಣಮಾದಿಪುರುಷಂ ನಮಾಮಿ ಗಿರಿಜಾಧವಮ್
ಗೀರ್ವಾಣಾರ್ಚಿತಪಾದಾಬ್ಜಂ ಗೀತತಾಣ್ಡವವತ್ಸಲಮ್ ||
ಗಿರಿಶಂ ಗೀಷ್ಪತಿಸ್ತುತ್ಯಂ ವನ್ದೇಹಂ ಸರ್ವಸಾಕ್ಷಿಣಮ್
ಉಮಾಕುಚಾಬ್ಜಲಾವಣ್ಯ ಮಧುಮತ್ತೇಕ್ಷಣಾಳಯೇ ||
ನಮೋ ವಿಶ್ವಾತ್ಮನೇ ತುಭ್ಯಂ ಸ್ವಭಾವಾಮಲತೇಜಸೇ
ಯಸ್ಯ ಪ್ರಸಾದಾದ್ಯೋಗೀನ್ದ್ರಾ ಜ್ಞಾನವನ್ತಃ ಪರಂ ಯಯುಃ ||
ತಂ ತ್ವಾಂ ಪ್ರಪದ್ಯೇ ದೇವೇಶ! ಸರ್ವಮಙ್ಗಳಕಾರಣಮ್
ಯಸ್ಮಾಚ್ಚರಾಚರಂ ವಿಶ್ವಂ ಜಾಯತೇ ಯತ್ರ ತಿಷ್ಠತಿ ||
ಲೀಯತೇ ಯತ್ರ ಸತತಂ ತಂ ಪ್ರಪದ್ಯೇ ಮಹೇಶ್ವರಮ್

ಈ ಪ್ರಕಾರದಲ್ಲಿ ಕುಮಾರಸ್ವಾಮಿಯು—ಸಾಕ್ಷಾತ್ಪರಶಿವನನ್ನು ಸ್ತು ದನನ್ತರಪೊಳ್ ಎಲೈ ಲೋಕಂಗಳಿಗೊಡೆಯನಾದ ಶಿವನೇ! ನಿನ್ನ ಪ್ರಸನ್ನತೆಯ ಯಿಂದೀಗ ವೀರಶೈವಸಿದ್ಧಾನ್ತದ ಸರ್ವಸ್ವವಹ ಷಟ್ಸ್ಥಲಜ್ಞಾನವು ನನ್ನಿಂದ ಪ ಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.

"ತ್ವತ್ಪ್ರಸಾದಾಜ್ಜಗನ್ನಾಥ! ಜ್ಞಾತಂ ಸರ್ವಂ ಮಯಾಽಧುನಾ ||
ಶೈವಸಿದ್ಧಾನ್ತಸರ್ವಸ್ವಂ ಷಟ್ಸ್ಥಲಬ್ರಹ್ಮವೇದನಮ್"

ನಿನ್ನ ಸ್ವರೂಪವನರಿವುದರ ದೆಸೆಯಿಂ ಸಮ್ಪೂರ್ಣಜ್ಞಾನವನ್ನೈದಿದೆನು, ಕ ರಣದಿಂ ಸರ್ವವಂ ಪರಿತ್ಯಜಿಸಿ ನಿನ್ನಂ ಮರೆಹೊಗುವೆನು. ಎಂಬಲ್ಲಿ ಸಾಕ್ಷಿಯು.

" ತ್ವತ್ಸ್ವರೂಪ ಪರಿಜ್ಞಾನಾದಾಸಂ ಸಮ್ಪೂರ್ಣವೇದನಮ್ ||
ತಸ್ಮಾತ್ಸರ್ವಂ ಪರಿತ್ಯಜ್ಯ ತ್ವಾಮಹಂ ಶರಣಂಗತಃ "

ಕುಮಾರಸ್ವಾಮಿಯು ಈ ಪ್ರಕಾರವಾಗಿ, ಉತ್ಪತ್ತಿರಹಿತನೂ, ಕರುಣೆಗೆ ಸ್ಥಾನನೂ, ಸಂಸಾರವಂ ಬಿಡಿಸುವವನೂ, ಪರಿಪೂರ್ಣನೂ, ಆನನ್ದಸ್ವರೂಪನೂ ಆದ ಪರಮೇಶ್ವರನನ್ನು ಸ್ತುತಿಸಿ, ತಚ್ಚರಣ ಕಮಲಭಕ್ತಿಯ ಅಭಿಪ್ರಾಯದ ಡೆಸೆಯಿಂದ ಆನನ್ದದಿಂ ತುಂಬಿದ ಮನಸ್ಸುಳ್ಳವನಾಗಿ, ಬಾಹ್ಯಪ್ರಪಂಚವನರಿಯಲಿಲ್ಲವೆಂಬಲ್ಲಿ ಸೂತಮುನಿಯ ವಾಕ್ಯವು ಸಾಕ್ಷಿಯು.—

" ಸ್ತುತ್ವೇತಿ ಶಙ್ಕರಮಜಂ ಕರುಣಾಲಯಂ ತಂ
ಸಂಸಾರಮೋಚಕಮಖಣ್ಡ ಸುಖಸ್ವರೂಪಮ್ ||
ಸ್ಕನ್ದೋಽಮ್ಬಿಕಾಧವ ಪದಾಮ್ಬುಜ ಭಕ್ತಿಭಾವಾತ್
ಆನನ್ದನಿರ್ಭರಮನಾಸ್ಸ ನ ವೇದ ಬಾಹ್ಯಮ್ "

ಎಲೈ ನೈಮಿಷಾರಣ್ಯವಾಸಿಗಳಾದ ಋಷಿಗಳಿರಾ! ನಿಮಗೆ ಈಗ ವೇದಶಾಸ್ತ್ರಂಗಳಲ್ಲಿ ಗೋಪ್ಯವೂ, ಮುಕ್ತಿಕಾನ್ತೆಯ ವಿವಾಹವಂ ಮಾಡಿಸುವಲ್ಲಿ ಸಮರ್ಥವೂ, ಸಾರವೂ ಆದ ಈ ಷಟ್ಸ್ಥಲನಿರ್ಣಯವು ಹೇಳಲ್ಪಟ್ಟಿತು. ಲೋಕದಲ್ಲಿ ಸಂಸಾರಬನ್ಧದ ಶಾನ್ತಿಗೋಸ್ಕರ ಈ ಷಟ್ಸ್ಥಲಜ್ಞಾನದಿಂದ ಅತ್ಯನ್ತಾಧಿಕವಾದುದು ಮತ್ತೊಂದಿಲ್ಲವು ಎಂಬಲ್ಲಿಸಾಕ್ಷಿಯು.—

" ಯುಷ್ಮಾಕ ಮದ್ಯ ಕಥಿತಶ್ಶ್ರುತಿತನ್ತ್ರಗೋಪ್ಯೋ
ಮುಕ್ತ್ಯಙ್ಗನೋದ್ವಹನ ಸಙ್ಘಟನಾಪಟೀಯಾನ್ ||
ಸಾರಸ್ತು ಷಟ್ಸ್ಥಲವಿನಿರ್ಣಯಏಷ ಲೋಕೇ
ನಾನ್ಯೋಽಸ್ತ್ಯತಃ ಪರತರೋ ಭವಬನ್ಧಶಾನ್ತ್ಯೈ "

ಎಲೈ ಬ್ರಾಹ್ಮಣರುಗಳಿರಾ! ನೀವು—ವಿಶ್ವಾಸದಿಂ ಕೂಡಿದವರಾಗಿ, ಅತಿಶಯವಾದ ಮೋಕ್ಷವಂ ಕೊಡುವ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಙ್ಗ, ಶರಣ, ಐಕ್ಯಗಳೆಂಬ ಷಟ್ಸ್ಥಲಗಳ ನಿರ್ಣಯವನ್ನು ಭಕ್ತಿಯುಳ್ಳ ಪ್ರಶಾನ್ತರಿಗೋಸ್ಕರ ವ್ಯಾಖ್ಯಾನವಂ ಮಾಡಿರಿ. ಎಂಬಲ್ಲಿ ಸಾಕ್ಷಿಯು.—

" ಯೂಯಂ ಶ್ರದ್ಧಾನ್ವಿತಾವಿಪ್ರಾಃ! ಸ್ಥಲಷಟ್ಕವಿನಿರ್ಣಯಮ್
ವ್ಯಾಕುರುಧ್ವಂ ಪ್ರಶಾನ್ತೇಭ್ಯಃ ಭಕ್ತಿಮದ್ಭ್ಯೋತಿಮುಕ್ತಿದಮ್ "

ಎಂದು ಸೂತಮುನಿಯ ವಾಕ್ಯವು.

ವೇದಶಾಸ್ತ್ರಪುರಾಣಾಗಮಾರ್ಥಗಳನ್ನು ಬಲ್ಲವನೂ, ಲಿಙ್ಗಧಾರಿಯೂ ಆದ

ಯಾವ ಶಿವಭಕ್ತನು-ಭವಬನ್ಧದಲ್ಲಿ ಸಿಕ್ಕಿರುವ ಜನರಿಗೆ ಸದ್ಗತಿಯಂ ಹೊಂದಿಸುವ ಕ್ಕೋಸ್ಕರ ಪರಮಾರ್ಥವಾದ ಲಿಙ್ಗಾಙ್ಗಸಮ್ಬನ್ಧವಿಷಯಮಾದ ವೀರಶೈವಶಾಸ್ತ್ರ ಕಥನವನ್ನು ಪ್ರಖ್ಯಾತವಂ ಮಾಡುತ್ತಿಹನೋ, ಆತನು—ಲಿಙ್ಗಧಾರಣವುಳ್ಳವನು ಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

" ಯಶ್ಶೈವಶಾಸ್ತ್ರಕಥನಂ ಪ್ರಕಟೀಕರೋತಿ
ಲಿಙ್ಗಾಙ್ಗಸಙ್ಗವಿಷಯಂ ಪರಮಾರ್ಥಭೂತಮ್ ||
ಲೋಕೇऽತಿದುರ್ಜನಘನೇ ಸಹಿ ಲಿಙ್ಗಧಾರೀ
ಮಾಹೇಶ್ವರಶ್ಶ್ರುತಿಪುರಾಣವಿದಾಗಮಜ್ಞಃ "

ಆ ಕಾರಣದಿಂ ಶಿವಕಥಾವಕ್ತೃಗಳನ್ನು ಸರ್ವಪ್ರಯತ್ನದಿಂದ ರಕ್ಷಿಸಬೇಕು. ಅದರಿಂದ ಮನುಷ್ಯರು-ಶಿವಸಮ್ಬನ್ಧವಹ ಧರ್ಮದಲ್ಲಿ ತಾತ್ಪರ್ಯವನುಳ್ಳವರಾಗುವರು. ಎಂಬಲ್ಲಿ ಸಾಕ್ಷಿಯು.—

" ತಸ್ಮಾಚ್ಛಿವಕಥಾವಕ್ತೄನ್ ರಕ್ಷೇತ್ಸರ್ವಪ್ರಯತ್ನತಃ ||
ತದ್ರಕ್ಷಣಾದ್ಭವಿಷ್ಯನ್ತಿ ಮರ್ತ್ಯಾ ಧರ್ಮಪರಾಯಣಾಃ "

ಎಲೈ ಬ್ರಹ್ಮರ್ಷಿಗಳಿರಾ! ನೀವು ನಂಬುಗೆಯಿಂ ಕೂಡಿದವರಾಗಿ, ಶಿವಲಿಙ್ಗಾ ರ್ಚನೆಯಲ್ಲಾ ಸಕ್ತರೂ, ಶಿವಾಗಮಗಳ ರಹಸ್ಯಗಳನ್ನು ಬಲ್ಲವರೂ ಆದ ಮಹಾಪು ರುಷರನ್ನು ಸರ್ವಪ್ರಯತ್ನದಿಂದಲೂ ರಕ್ಷಿಸಿರಿ. ಎಂಬಲ್ಲಿ ಸಾಕ್ಷಿಯು.—

" ಯೂಯಂ ಶ್ರದ್ಧಾನ್ವಿತಾ ವಿಪ್ರಾಃ ರಕ್ಷಧ್ವಂ ಸರ್ವಯತ್ನತಃ ||
ಶಿವಾಗಮರಹಸ್ಯಜ್ಞಾನ್ ಶಿವಲಿಙ್ಗಾರ್ಚನಾಪರಾನ್ "

ಭಕ್ತಿಯಿಂದ ಈ ಅಧ್ಯಾಯವನ್ನು ಪಠಿಸಿದವನು ಸಮ್ಯಗ್ಜ್ಞಾನಿಯಾಗಿ ಶಿವ ಸಾಯುಜ್ಯವನ್ನು ಹೊಂದುವನು. ಎಂಬಲ್ಲಿ ಸಾಕ್ಷಿಯು.—

" ಯ ಇಮಂ ಪಠತೇऽಧ್ಯಾಯಂ ನರೋ ಭಕ್ತಿಸಮನ್ವಿತಃ ||
ಸ ಸಮ್ಯಗ್ಜ್ಞಾನವಾನ್ಭೂತ್ವಾ ಶಿವಸಾಯುಜ್ಯಮಾಪ್ನುಯಾತ್ "

ಶಿವಪೂಜಾಕಾಲದಲ್ಲಿ ನಿಶ್ಚಲಚಿತ್ತನಾಗಿ ಈ ಅಧ್ಯಾಯವನ್ನು ಕೇಳಿದವನಿಗೆ ಅಥವಾ ಕೇಳಿಸಿದವನಿಗೆ ವಿಷಕಣ್ಠನೂ, ಪಾರ್ವತೀರಮಣನೂ, ಮಙ್ಗಳಸ್ವರೂಪನೂ ಆದ ಶ್ರೀ ಶಿವಸ್ವಾಮಿಯು ಪ್ರಸನ್ನನಾಗುತ್ತಿಹನು. ಎಂಬಲ್ಲಿ ಸಾಕ್ಷಿಯು.—

" ಶೃಣೋತಿ ಪೂಜಾವೇಳಾಯಾಂ ಶ್ರಾವಯೇದ್ವಾ ಸಮಾಹಿತಃ ||
ಪ್ರಸೀದತಿ ಶಿವಸ್ತಸ್ಯ ನೀಲಕಣ್ಠೋऽಮ್ಬಿಕಾಪತಿಃ "

ಈ ವೀರಶೈವಶಾಸ್ತ್ರವನ್ನು-ಶಿವಭಕ್ತಿಯಿಲ್ಲದವನೂ, ನಾಸ್ತಿಕನೂ, ವೇದ

ಸ್ತ್ರಪುರಾಣಂಗಳನ್ನು ಹುಸಿಯೆಂದು ನಿರಾಕರಿಸತಕ್ಕವನೂ, ನಂಬುಗೆಯಿಲ್ಲದವನೂ, ಕೃತಘ್ನನೂ ಆದವನಿಗೋಸ್ಕರ ಯಾವಕಾಲದಲ್ಲಾದರೂ ಹೇಳಲಾಗದು. ಎಂಬಲ್ಲಿ ಸಾಕ್ಷಿಯು.—

" ನ ವಕ್ತವ್ಯಮಿದಂ ಶಾಸ್ತ್ರಂ ಭಕ್ತಿಹೀನಾಯ ಪಾಪಿನೇ ||
ನಾಸ್ತಿಕಾಯ ಕೃತಘ್ನಾಯ ಶ್ರದ್ಧಾಹೀನಾಯ ಜಾತುಚಿತ್ "

(ಈ ಷಟ್ಸ್ಥಲಪ್ರಕರಣದಲ್ಲಿ ಪೂರ್ವಪೀಠಿಕೆಯೂ ಉತ್ತರಪೀಠಿಕೆಯೂ ಭಕ್ತಸ್ಥಲಾದಿ ಷಟ್ಸ್ಥಲಗಳಲ್ಲಿ ಒಂದೊಂದು ಶ್ಲೋಕವೂ ಸ್ಕಂದಪುರಾಣದಲ್ಲಿರುವ ಶಾಂಕರಸಂಹಿತೆಯಲ್ಲಿ ಶಿವಷಣ್ಮುಖಸಂವಾದವಂ ಸೂತಮುನೀಶ್ವರನು ಶೌನಕಾದಿಮುನಿಗಳಿಗೆ ನಿರೂಪಿಸಿದುದು. ಮಿಕ್ಕುದೆಲ್ಲವೂ ಆಗಮಪುರಾಣಂಗಳಲ್ಲಿರುವ ವಚನಗಳು ಸಂಗ್ರಹಿಸಿ ನಿರೂಪಿಸಲ್ಪಟ್ಟಿರುತ್ತವೆ.)

ಇತಿ ಶ್ರೀಮತ್ಪರಶಿವಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾ
ನವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ
ಪ್ರಮಾಣ ಪಾರಾವಾರ ಪಾರೀಣನಾದ, ನಿರಾಭಾರ ವೀರಶೈವಸಾ
ಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾ
ರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್
ಪ್ರಕಾರಾನ್ತರೇಣಷಟ್ಸ್ಥಲನಿರೂಪಣಮ್

ಷಟ್ಸ್ಥಲಪ್ರಕರಣಂ ಸಮ್ಪೂರ್ಣಮ್.



|| ಶ್ರೀಃ ||
ಶ್ರೀದಕ್ಷಿಣಾಮೂರ್ತಯೇನಮಃ
ಅಷ್ಟಾವರಣಪ್ರಕರಣಪ್ರಾರಂಭವು.

## ಗುರುಸ್ಥಲವು.



" ಗುರುರ್ಲಿಙ್ಗಂ ಚರಶ್ಚೈವ ಪ್ರಸಾದಃ ಪಾದವಾರಿ ಚ || ಭೂತಿರುದ್ರಾಕ್ಷಮನ್ತ್ರಾಶ್ಚ ಭಕ್ತಾಙ್ಗಮಿತಿ ಕಥ್ಯತೇ " ಎಂಬ ಚನ್ದ್ರಜ್ಞಾನಾಗಮವಚನಾನುಸಾರವಾಗಿ ಗುರು, ಲಿಙ್ಗ, ಜಙ್ಗಮ, ಪ್ರಸಾದ, ಪಾದೋದಕ, ಭಸ್ಮ, ರುದ್ರಾಕ್ಷಿ,

ಮ್ನನ್ತ್ರಗಳೇ ಭಕ್ತನೆನಿಸಿದ ಜೀವನಿಗೆ ಅಷ್ಟಾವರಣಗಳೆಂದೆನಿಸಿರ್ಪವು. ಅವುಗಳ ಸ್ವರೂಪವಂ ನಿರೂಪಿಸುವಲ್ಲಿ ತದಾದಿಯೊಳ್ ಗುರುಲಕ್ಷಣವಂ ನಿರೂಪಿಸುವೆನದೆಂತನೆ.—

ಪೂರ್ವೋಕ್ತವಾದ ಶಿವಾಚಾರಗಳಿಂ ಸಂಪನ್ನನಾದ ವೀರಶೈವಮಹಾವ್ರತಿಯು ಉತ್ಕೃಷ್ಟವಾದ ಭಕ್ತಿಯಿಂ ಕೂಡಿದವನಾಗಿ, ಯಾವಾಗಲೂ ಶ್ರೀಗುರುವನ್ನೂ ಶ್ರೀಗುರುವಿನಿಂದ ಕೊಡಲ್ಪಟ್ಟ ಲಿಙ್ಗವನ್ನೂ ಜಙ್ಗಮನನ್ನೂ ಪೂಜಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಏವಮಾಚಾರಸಂಯುಕ್ತೋ ವೀರಶೈವೋ ಮಹಾವ್ರತೀ ||
ಪೂಜಯೇತ್ಸತತಂ ಭಕ್ತ್ಯಾ ಗುರುಂ ಲಿಙ್ಗಂ ಚ ಜಙ್ಗಮಮ್ "

"ಯಸ್ಯದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ" ಎಂಬ ಶ್ವೇತಾಶ್ವತರ ಶ್ರುತಿಯುಂಟಾಗಿ, ಪೂಜಕನು-ತನಗೆ ಉಪದೇಶವಂ ಮಾಡಿದ ಸದ್ಗುರುವನ್ನು ಪೂಜಿಸುವುದರಿಂ, ಪ್ರತ್ಯಕ್ಷ ಶಿವನೇ ಪೂಜಿಸಲ್ಪಡುವನು. ಆ ಕಾರಣದಿಂ ಶಿವಗುರುಗಳಿಗೆ ಪರಮಾರ್ಥಪರಾಮರ್ಶದತ್ತಣಿಂದೇಕರೂಪತ್ವವಿರುವುದರಿಂದ ಸ್ವಲ್ಪವಾದರೂ ಭೇದವಿಲ್ಲವು, ಆದುದರಿಂ ಭಕ್ತಸ್ಥಲಪ್ರವಿಷ್ಟನು-ಸರ್ವಜಗನ್ನಾಯಕನೂ, ಸರ್ವಾನುಗ್ರಾಹಕನೂ ಆದ ಶಿವನಲ್ಲಿ ಹ್ಯಾಗೆ ಉಪಚಾರಂಗಳಂ ಮಾಡುತ್ತಾನೆಯೋ, ಹಾಗೆ ಸದ್ಗುರುವಿನಲ್ಲಿ ಭಕ್ತ್ಯಾದ್ಯುಪಚಾರಂಗಳನ್ನು ಪ್ರತಿದಿವಸದಲ್ಲಿಯೂ ಬಿಡದೆ ಆಚರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಗುರೋರಭ್ಯರ್ಚನೇನಾಪಿ ಸಾಕ್ಷಾದಭ್ಯರ್ಚಿತಶ್ಶಿವಃ ||
ತಯೋರ್ನಾಸ್ತಿ ಭಿದಾ ಕಿಞ್ಚಿದೇಕತ್ವಾತ್ತತ್ಸ್ವರೂಪತಃ ||
ಯಥಾ ದೇವೇ ಜಗನ್ನಾಥೇ ಸರ್ವಾನುಗ್ರಹಕಾರಕೇ ||
ತಥಾ ಗುರುವರೇ ಕುರ್ಯಾದುಪಚಾರಾನ್ದಿನೇ ದಿನೇ "

ಶಿವನಿಗೂ ಗುರುವಿಗೂ ಭೇದವಿಲ್ಲವೆನ್ನುವುದಾದರೆ, ಶಿವನಂತೆ ಗುರುವು ಅಪ್ರತ್ಯಕ್ಷನಾಗಲಿ ಎಂದು ಶಂಕೆಯು ಪ್ರಾಪ್ತವಾದಲ್ಲಿ; ಸಚ್ಚಿದಾನನ್ದಸ್ವರೂಪನಾದ ಆ ಪರಮೇಶ್ವರನು-ತನ್ನ ಮಾಯಾಶಕ್ತಿಯಿಂದ ಸಕಲರಿಗೂ ಅಪ್ರತ್ಯಕ್ಷನಾದರೂ, ಭಕ್ತಿಸಿದ್ಧ್ಯರ್ಥವಾಗಿ, ಸದ್ಗುರುರೂಪದಿಂ ಪ್ರತ್ಯಕ್ಷನಾಗಿರುತ್ತಾನೆ. ಎಂಬಲ್ಲಿ ಸಾಕ್ಷಿಯು.-

", ಅಪ್ರತ್ಯಕ್ಷೋ ಮಹಾದೇವಸ್ಸರ್ವೇಷಾಮಾತ್ಮಮಾಯಯಾ ||
ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ "

ಗುರುವು-ಶಿವನಂತೆ, ಇಷ್ಟಾರ್ಥಗಳಂ ಕೊಡುವುದಿಲ್ಲವಾದ್ದರಿಂದ ಈತನನ್ನು ಏತಕ್ಕೋಸ್ಕರ ಪೂಜಿಸಬೇಕೆಂದರೆ; ಯಾವ ಸದ್ಗುರುವಿನಿಂ ಮಹಾಭಯಙ್ಕರವಾದ

ಸಂಸಾರಸಮುದ್ರವಂ ದಾಂಟಿಸುವ ಶಿವಜ್ಞಾನವುಉಪದೇಶಿಸಲ್ಪಡುತ್ತಿಹುದೋ, ಆ ಸದ್ಗುರುವು-ಯಾವನಿಂದ ವಂದಿಸಿಕೊಳ್ಳಲಿಕ್ಕೆ ಯೋಗ್ಯನಾಗಿರುವುದಿಲ್ಲವು ? ಜನನ ಮರಣ ಸಂಪೀಡಿತರಾಗಿರುವವರೆಲ್ಲರಿಂದಲೂ ವನ್ದ್ಯನಾಗಿರುತ್ತಾನೆ ಎಂಬಲ್ಲಿ ಸಾಕ್ಷಿಯು.—

" ಶಿವಜ್ಞಾನಂ ಮಹಾಘೋರಸಂಸಾರಾರ್ಣವತಾರಕಮ್ ||
ದೀಯತೇ ಯೇನ ಸ ಗುರುಃ ಕಸ್ಯವನ್ದ್ಯೋ-ನ ಜಾಯತೇ "

ಆ ಶಿವಜ್ಞಾನವೆಂತಹುದೆಂದರೆ.—ಯಾವ ಶ್ರೀಗುರುವಿನ ಕಟಾಕ್ಷಲೇಶಮಾತ್ರದಿಂ ಪರಮಾನನ್ದರೂಪಮಾದ ಸ್ವಾತ್ಮ ಶಿವತ್ವವು-ದಶಮಪುರುಷದೃಷ್ಟಾಂತದಿಂ ಪ್ರಾಪ್ತವಾಗುತ್ತಿಹುದೋ, ಅಂತಪ್ಪ ಗುರುವು ಯಾರಿಂದ ಪೂಜಿಸಲ್ಪಡುವುದಿಲ್ಲವು ? ಮಾಯಾವಿಮೋಹಿತರಾದವರೆಲ್ಲರಿಂದಲೂ ಪೂಜಿಸಲ್ಪಡುತ್ತಾನೆ. ಎಂಬಲ್ಲಿಸಾಕ್ಷಿಯು.

" ಯತ್ಕಟಾಕ್ಷಕಲಾಮಾತ್ರಾತ್ಪರಮಾನನ್ದಲಕ್ಷಣಮ್ ||
ಲಭ್ಯತೇ ಶಿವರೂಪತ್ವಂ ಸ ಗುರುಃ ಕೇನ ನಾರ್ಚ್ಯತೇ "

ರಾಗದ್ವೇಷರಹಿತನೂ, ಶಿವಜ್ಞಾನಕ್ಕೆ ಸಮುದ್ರನೂ ಆದ ಶ್ರೀ ಸದ್ಗುರುವಿಗೆ ಶರೀರದಿಂದಲೂ, ದ್ರವ್ಯದಿಂದಲೂ ಹಿತವನ್ನೇ ಮಾಡಬೇಕು. ನಿತ್ಯಾನಿತ್ಯವಸ್ತುವಿವೇಕವುಳ್ಳವನೂ, ಮೋಕ್ಷಾರ್ಥಿಯೂ ಆದ ಶಿಷ್ಯನು-ಆತನ ಆಜ್ಞೆಯಂ ಮೀರಲಾಗದು. ಮೀರಿದೊಡೆ ಶಿವಾಜ್ಞೆಗೆ ಭಂಗವನ್ನುಂಟುಮಾಡಿದವನಾಗುವನು, ಆದರಿಂದ ನರಕವೇ ಉಂಟಾಗುವುದು. ಎಂಬಲ್ಲಿ ಸಾಕ್ಷಿಯು.—

" ಹಿತಮೇವ ಚರೇನ್ನಿತ್ಯಂ ಶರೀರೇಣ ಧನೇನ ಚ ||
ಆಚಾರ್ಯಸ್ಯೋಪಶಾನ್ತಸ್ಯ ಶಿವಜ್ಞಾನಮಹೋದಧೇಃ ||
ಗುರೋರಾಜ್ಞಾಂ ನ ಲಂಘೇತ ಸಿದ್ಧಿಕಾಮೀಮಹಾಮತಿಃ ||
ತದಾಜ್ಞಾಲಙ್ಘನೇನಾಪಿ ಶಿವಾಜ್ಞಾಭೇದಕೋ ಭವೇತ್ "

ಯಾವಕಾರಣದಿಂ ಶಿವನೇ ಪ್ರತ್ಯಕ್ಷಗುರುರೂಪದಿಂದಿರುತ್ತಿಹನೋ, ಆ ಕಾರಣದಿಂದ ಈ ಲೋಕದಲ್ಲಿ ಭೋಗಮೋಕ್ಷಗಳಂ ಕೊಡುವ ಸಕಲಸಿದ್ಧಿಕರ್ಮಗಳಿಗೂ ಸದ್ಗುರುವೇ ಕಾರಣನು ಎಂಬಲ್ಲಿ ಸಾಕ್ಷಿಯು.—

" ಗುರುರೇವಾತ್ರ ಸರ್ವೇಷಾಂ ಕಾರಣಂ ಸಿದ್ಧಿಕರ್ಮಣಾಮ್ ||
ಗುರುರೂಪೋ ಮಹಾದೇವೋ ಯತಸ್ಸಾಕ್ಷಾದುಪಸ್ಥಿತಃ "

ಮತ್ತಂ, ನಿತ್ಯಜ್ಞಾನಸಮುದ್ರನಾದ ಮಹೇಶ್ವರನು-ನಿಷ್ಕಲನೂ, ನಿರವಯವನೂ ಆದಾಗ್ಯೂ, ಗುರುರೂಪದಿಂ ಸಕಲನೂ ಸರ್ವಾನುಗ್ರಾಹಕನೂ ಆಗಿರುವನು ಎಂಬಲ್ಲಿ ಸಾಕ್ಷಿಯು.—

" ನಿಷ್ಕಳೋ ಪಿ ಮಹಾದೇವೋ ನಿತ್ಯಜ್ಞಾನಮಹೋದಧಿಃ ||
ಸಕಲೋ ಗುರುರೂಪೇಣ ಸರ್ವಾನುಗ್ರಾಹಕೋ ಭವೇತ್ "

ಶಿವಸ್ವರೂಪದಿಂದಿರುವ ಶ್ರೀ ಗುರುಸ್ವಾಮಿಯನ್ನು ಹಸ್ತಪಾದಾದಿ ಸಾಮ್ಯದಿಂ ಪ್ರಾಕೃತರೊಡನೆ ಸಮಾನನನ್ನಾಗಿ ನುಡಿಯಲಾಗದು. ಆಚಾರ್ಯನಿಗವಮಾನವಂ ಮಾಡುವುದರಿಂ ಭೋಗಮೋಕ್ಷರೂಪಮಾದ ಶ್ರೇಯಸ್ಸು ಕೆಟ್ಟು ಪೋಪುದು, ಆ ಕಾರಣದಿಂ ಭೋಗಮೋಕ್ಷಗಳಂ ಹೊಂದುವುದಕ್ಕಾಗಿ ಸ್ಥಿರಚಿತ್ತನಾಗಿ ಸದ್ಗುರುವಂ ಪೂಜಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಹಸ್ತಪಾದಾದಿ ಸಾಮ್ಯೇನ ನೇತರೈಸ್ಸದೃಶಂ ವದೇತ್ ||
ಆಚಾರ್ಯಂ ಜ್ಞಾನದಂ ಶುದ್ಧಂ ಶಿವರೂಪತಯಾ ಸ್ಥಿತಮ್ ||
ಆಚಾರ್ಯಸ್ಯಾವಮಾನೇನ ಶ್ರೇಯಃಪ್ರಾಪ್ತಿರ್ನಿಹನ್ಯತೇ ||
ತಸ್ಮಾನ್ನಿಶ್ರೇಯಸಪ್ರಾಪ್ತ್ಯೈ ಪೂಜಯೇತ್ತಂ ಸಮಾಹಿತಃ "

ಮತ್ತಂ, ಗುರುಭಕ್ತಿಯಿಲ್ಲದವನಿಗೆ ಶಿವಭಕ್ತಿಯೇ ಹುಟ್ಟುವುದಿಲ್ಲವು, ಆ ಕಾರಣದಿಂ ಶ್ರೀ ಪರಶಿವನಲ್ಲಿ ಹ್ಯಾಗೆ ಭಕ್ತಿಯು ಮಾಡಲ್ಪಡುತ್ತಿಹುದೋ, ಹಾಗೆ ಗುರುವಿನಲ್ಲಿಯೂ ಭಕ್ತಿಯಂ ಮಾಡಬೇಕು. ಎಂಬಲ್ಲಿ ಸಾಕ್ಷಿಯು.—

" ಗುರುಭಕ್ತಿವಿಹೀನಸ್ಯ ಶಿವಭಕ್ತಿರ್ನ ಜಾಯತೇ ||
ತತಶ್ಶಿವೇ ಯಥಾ ಭಕ್ತಿಸ್ತಥಾ ಭಕ್ತಿರ್ಗುರಾವಪಿ"

ಗುರುವು-ಯಾವಲಕ್ಷಣದಿಂ ಕೂಡಿದವನೆಂದರೆ,-ಲೋಕಪ್ರಸಿದ್ಧನೂ, ಲೋಭಮೋಹಗಳಿಲ್ಲದವನೂ, ಆತ್ಮನ ಯಥಾರ್ಥಸ್ವರೂಪವಂ ಬಲ್ಲವನೂ, ಶಬ್ದಾರ್ಥಮಯವಾದ ಪ್ರಪಂಚವೆಲ್ಲವೂ ಶಿವಶಕ್ತ್ಯಾತ್ಮಕವೆಂಬ ವಿಚಾರಬಲದಿಂ ಘಟಾದಿವಿಷಯಂಗಳಲ್ಲಿ ಭೇದಭ್ರಾನ್ತಿಯಿಲ್ಲದವನೂ, ಶಿವಾದ್ವೈತಸಿದ್ಧಾನ್ತತತ್ತ್ವವನ್ನು ತಿಳಿದವನೂ, ಭೇದಿಸಲ್ಪಟ್ಟ ಸಂಶಯವುಳ್ಳವನೂ, ಚತುಷ್ಷಷ್ಟಿತನ್ತ್ರಪ್ರಯೋಗಗಳನ್ನು ತಿಳಿದವನೂ, ಶಿವಧರ್ಮನಿಷ್ಠನೂ, ನಿಜವನ್ನು ನುಡಿಯುತಕ್ಕವನೂ, ಗುರುಪರಂಪರಾಗತಮಾದ ಶಾಸ್ತ್ರೀಯವಾದ ಆಚಾರಗಳುಳ್ಳವನೂ, ಕುಮಾರ್ಗಾಚಾರರಹಿತನೂ, ಶಿವಲಿಙ್ಗಚಿನ್ತಾರತನೂ, ರಾಗದ್ವೇಷಾದಿಗಳಿಲ್ಲದವನೂ, ಶಿವತತ್ತ್ವಸ್ವರೂಪವಂ ತಿಳಿದವನೂ, ಭಸ್ಮೋದ್ಧೂಳನಕ್ರಿಯೆಯಲ್ಲಿ ನಿಪುಣನೂ, ಭಸ್ಮಸ್ವರೂಪವಿವೇಕವುಳ್ಳವನೂ, ತ್ರಿಪುಣ್ಡ್ರಧಾರಣದಲ್ಲಿ ಲವಲವಿಕೆಯುಳ್ಳವನೂ, ಧರಿಸಲ್ಪಟ್ಟ ರುದ್ರಾಕ್ಷಮಾಲಿಕೆಗಳುಳ್ಳವನೂ, ಬಾಹ್ಯಾಭ್ಯನ್ತರಾಙ್ಗಗಳಲ್ಲಿ ಲಿಙ್ಗಧಾರಣೆಯುಳ್ಳವನೂ, ಬಾಹ್ಯಲಿಙ್ಗಾನ್ತರ್ಲಿಂಗಾರಾಧನೆಯಲ್ಲಾಸಕ್ತನೂ, ಲಿಂಗಾಂಗಗಳ ಸಂಬಂಧವಂ ತಿಳಿದವನೂ, ನಿರೂಢವಾದ

ಶಿವಾದ್ವೈತ ಸಂಸ್ಕಾರವಂ ಹೊಂದಿದವನೂ, ಲಿಂಗಾಂಗಸ್ಥಲಗತಮಾದ ಏಕೋತ್ತರ ಶತಸ್ಥಲಭೇದವಂ ತಿಳಿದವನೂ, ಶುಭವಚನವಂ ನುಡಿಯತಕ್ಕವನೂ ಆದ ಸದ್ಗುರುವನ್ನು ಭಕ್ತನು-ತನ್ನ ತನುಮನೋಧನಗಳಿಂದ ಪೂಜಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಪೂಜಯೇಲ್ಲೋಕವಿಖ್ಯಾತಂ ಲೋಭಮೋಹವಿವರ್ಜಿತಮ್ ||
ಆತ್ಮತತ್ವವಿಚಾರಜ್ಞಂ ವಿಮುಕ್ತವಿಷಯಭ್ರಮಮ್
ಶಿವಸಿದ್ಧಾನ್ತತತ್ವಜ್ಞಂ ಛಿನ್ನಸನ್ದೇಹವಿಭ್ರಮಮ್ ||
ಸರ್ವತನ್ತ್ರಪ್ರಯೋಗಜ್ಞಂ ಧಾರ್ಮಿಕಂ ಸತ್ಯವಾದಿನಮ್ ||
ಕುಲಕ್ರಮಾಗತಾಚಾರಂ ಕುಮಾರ್ಗಾಚಾರವರ್ಜಿತಮ್ ||
ಶಿವಜ್ಞಾನಪರಂ ಶಾನ್ತಂ ಶಿವತತ್ತ್ವವಿವೇಕಿನಮ್ ||
ಭಸ್ಮೋದ್ಧೂಳನ ನಿಷ್ಣಾತಂ ಭಸ್ಮತತ್ವವಿವೇಕಿನಮ್ ||
ತ್ರಿಪುಣ್ಡ್ರಧಾರಣೋತ್ಕಣ್ಠಂ ಧೃತರುದ್ರಾಕ್ಷಮಾಲಿಕಮ್ ||
ಲಿಙ್ಗಧಾರಣ ಸಂಯುಕ್ತಂ ಲಿಙ್ಗಪೂಜಾಪರಾಯಣಮ್ ||
ಲಿಙ್ಗಾಙ್ಗಯೋಗತತ್ವಜ್ಞಂ ನಿರೂಢಾದ್ವೈತವಾಸಿನಮ್ ||
ಲಿಙ್ಗಾಙ್ಗಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಮ್ "

ಇತಿ ಶ್ರೀಮತ್ಪರಶಿವ ಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲ ಜ್ಞಾನ ವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದ ವಾಕ್ಯಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವ ಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾ ಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿ ಯೊಳ್ ಅಷ್ಟಾವರಣ ಪ್ರಕರಣದಲ್ಲಿ ಗುರು ಸ್ಥಲನಿರೂಪಣಮ್.

|| ಶ್ರೀಃ ||

ಈಶಾಯನಮಃ

# ಲಿ ಙ್ಗ ಸ್ಥ ಲ ಮ್.

ಲಿಙ್ಗಲಕ್ಷಣವಂ ನಿರೂಪಿಸುವೆನದೆಂತೆನೆ:—

ಗುರುವಿನ ಮಹಿಮೆಯ ಸಮ್ಬನ್ಧದಿಂದುಂಟಾದ ನಿಜಜ್ಞಾನೋದ್ರೇಕದತ್ತಣಿಂ ಲಿಙ್ಗದ ಮಹತ್ತ್ವವು—ಸರ್ವೋತ್ಕೃಷ್ಟವಾಗಿ ತಿಳಿಯಲ್ಪಡುತ್ತದೆ. ಎಂಬಲ್ಲಿ ಸಾಕ್ಷಿಯು.—

" ಗುರುಮಾಹಾತ್ಮ್ಯಯೋಗೇನ ನಿಜಜ್ಞಾನಾತಿರೇಕತಃ ||
ಲಿಙ್ಗಸ್ಯಾಪಿಚ ಮಾಹಾತ್ಮ್ಯಂ ಸರ್ವೋತ್ಕೃಷ್ಟಂ ವಿಭಾವ್ಯತೇ "

ಲಿಙ್ಗಜ್ಞಾನವಿಲ್ಲದೆ ಲಿಙ್ಗಮಹತ್ತ್ವಜ್ಞಾನ ಮುಂಟಾಗುವುದಿಲ್ಲವಾದ್ದರಿಂದ ಲಿಙ್ಗಸ್ವರೂಪವು ಯಾವನಿಂ ತಿಳಿಯಲ್ಪಡುವುದೆಂದರೆ,—ಶಿವನ ಯಾವ ಚಿನ್ಮಯಲಿಙ್ಗಮುಂಟೋ, ಅದು—ವಿಷ್ಣ್ವಾದಿ ಸಕಲ ವಿಶ್ವಕ್ಕೂ ಮೂಲಕಾರಣವೆಂದು ಗುರೂಪದೇಶವನ್ನು ಹೊಂದಿದವನಿಂದ ತಿಳಿಯಲು ಯೋಗ್ಯವಾಗಿರುತ್ತದೆ. ಎಂಬಲ್ಲಿ ಸಾಕ್ಷಿಯು.—

" ಶಿವಸ್ಯ ಬೋಧಲಿಙ್ಗಂ ಯದ್ಗುರುಬೋಧಿತಚೇತಸಾ ||
ತದೇವಲಿಙ್ಗಂ ವಿಜ್ಞೇಯಂ ಶಾಙ್ಕರಂ ಸರ್ವಕಾರಣಮ್ "

ಆ ಶಿವಲಿಙ್ಗಮೂರ್ತಿಯೆಂತಪ್ಪುದೆಂದರೆ—ಚರಾಚರ ಪ್ರಪಂಚಕ್ಕಿಂತ ಶ್ರೇಷ್ಠವೂ, ನಿರ್ಮಲವೂ, ಪವಿತ್ರವೂ, ನಿತ್ಯವೂ, ಶಿವನೆಂಬ ಹೆಸರುಳ್ಳುದೂ, ಚಿದಾನನ್ದರೂಪವೂ, ಕಡೆಯಿಲ್ಲದುದೂ, ಸಮಸ್ತಲೋಕಂಗಳಿಗೂ ವಿಷ್ಣ್ವಾದಿಗಳಿಗೂ ಕಾರಣವೂ, ಮಯೂರಾಣ್ಡರಸನ್ಯಾಯದಿಂ ಸಕಲ ತತ್ತ್ವಗಳಿಂದ ಪೂರ್ಣವೂ, ಜೀವರನ್ನು ಸಂಸಾರ ಸಮುದ್ರದ ದೆಸೆಯಿಂ ದಾಂಟಿಸುವುದೂ, ಜ್ಯೋತಿರ್ಮಯವೂ, ಯೋಗಿಗಳಿಂದಲೂ ತಿಳಿಯಲ್ಬಾರದುದೂ, ತನ್ನ ನಿಜಸ್ವರೂಪದಲ್ಲಿಯೇ ಇರತಕ್ಕುದೂ ಆಗಿರುವ ಪರಬ್ರಹ್ಮವಾದ ಮಹಾಲಿಙ್ಗವು—" ತದ್ವಿಜ್ಞಾನಂ ಸದ್ಗುರೋರ್ಜ್ಞೇಯಂ ನಾನ್ಯಥಾ ಶಾಸ್ತ್ರಕೋಟಿಭಿಃ " ಎಂಬ ಶಿವರಹಸ್ಯವಚನಾನುಸಾರವಾಗಿ, ಜನರಿಂದ ಶ್ರೀಗುರುವಿನ ದಯೆ ಹೊರತಾಗಿ ಯಾವ ಪ್ರಕಾರದಿಂದಲೂ ತಿಳಿಯಲ್ಪಡುವುದಿಲ್ಲವೆಂಬಲ್ಲಿ ಸಾಕ್ಷಿಯು.—

" ಪರಂ ಪವಿತ್ರಮಮಲಂ ಲಿಙ್ಗಂ ಬ್ರಹ್ಮ ಸನಾತನಮ್ ||
ಶಿವಾಭಿಧಾನಂ ಚಿನ್ಮಾತ್ರಂ ಸದಾನನ್ದಂ ನಿರಙ್ಕುಶಮ್ ||
ಕಾರಣಂ ಸರ್ವಲೋಕಾನಾಂ ದೇವಾನಾಮಪಿ ಕಾರಣಮ್ ||
ಪೂರಣಂ ಸರ್ವತತ್ವಾನಾಂ ತಾರಣಂ ಭವವಾರಿಧೇಃ ||
ಜ್ಯೋತಿರ್ಮಯಮನಿರ್ದೇಶ್ಯಂ ಯೋಗಿನಾಮಾತ್ಮನಿ ಸ್ಥಿತಮ್||
ಕಥಂ ವಿಜ್ಞಾಯತೇಲಿಙ್ಗೇಕೈರ್ಮಹಾಗುರುದಯಾಂ ವಿನಾ "

ಆ ಲಿಙ್ಗಮೂರ್ತಿಯನ್ನು ತಿಳಿಯಲಶಕ್ತರಾದ ಅಸ್ಮದಾದಿಗಳಿಗೆ ಗುರುಕೃಪೆಯು ಬೇಡವಲ್ಲಾ ಎಂದರೆ, " ವರಾಹೋ ವಿಷ್ಣುರ್ನಿಮಮಜ್ಜ ಭೂಮೌ ಬ್ರಹ್ಮೋತ್ಪಪಾತ ದಿವಮಾಶು ಗೃದ್ಧ್ರಃ " ಎಂಬ ವಚನಾನುಸಾರವಾಗಿ ಜ್ಯೋತಿರ್ಮಯವಾದ ಯಾವ ಲಿಙ್ಗವು ಪೂರ್ವದಲ್ಲಿ ಬ್ರಹ್ಮನಿಂದಲೂ, ವಿಷ್ಣುವಿನಿಂದಲೂ ತಿಳಿಯಲಶಕ್ಯಮಾಯಿತೋ, ಆ ಮಹಾಲಿಙ್ಗವು ಯಾರಿಂದಲೂ ತಿಳಿಯಲು ಶಕ್ಯವಲ್ಲವು. ಎಂಬಲ್ಲಿ ಸಾಕ್ಷಿಯು.—

" ಬ್ರಹ್ಮಣಾ ವಿಷ್ಣುನಾ ಪೂರ್ವಂ ಯಲ್ಲಿಙ್ಗಂ ಜ್ಯೋತಿರಾತ್ಮಕಮ್ ||
ಅಪರಿಚ್ಛೇದ್ಯಮಭವತ್ಕೇನ ವಾ ಪರಿ ಚೋದ್ಯತೇ "

ಹಲವು ಮಾತುಗಳಿಂದ ಫಲವಿಲ್ಲವು, ಯಾವ ಪರಬ್ರಹ್ಮದಲ್ಲಿ ಅವಿದ್ಯಾದಿ ಪಾಶರಹಿತರಾದ ಸನಕಾದಿ ಯೋಗಿಗಳು ತಾದಾತ್ಮ್ಯವಂ ಹೊಂದಿದರೋ, ಆ ಬ್ರಹ್ಮವೇ ಜಗದಾದಿಯಾದ ಮಹಾಲಿಙ್ಗವು ಎಂಬಲ್ಲಿ ಸಾಕ್ಷಿಯು.—

" ಬಹುನಾತ್ರ ಕಿ ಮುಕ್ತೇನ ಲಿಙ್ಗಂ ಬ್ರಹ್ಮಸನಾತನಮ್ ||
ಯೋಗಿನೋ ಯತ್ರ ಲೀಯನ್ತೇ ಮುಕ್ತಪಾಶನಿಬನ್ಧನಾಃ "

" ಕ್ರಿಯಾಶಕ್ತ್ಯಾತ್ಮಕಂ ಪೀಠಂ ಜ್ಞಾನಶಕ್ತ್ಯಾತ್ಮನಃ ಪ್ರಭೋಃ " ಎಂದು ಶಿವಾಗಮ ವಚನವಿರುವುದರಿಂದ ಶ್ರೇಷ್ಠವಾದ ಕ್ರಿಯಾಶಕ್ತಿಯೇ ಪೀಠವು. ಚಿದ್ರೂಪನಾದ ಪರಮೇಶ್ವರನೇ ಲಿಙ್ಗವು. ಈ ಪ್ರಕಾರಮಾದ ಶಿವಶಕ್ತಿಯೋಗವುಳ್ಳ ಆ ಲಿಙ್ಗವು " ಜ್ಞಾನಕರ್ಮೇನ್ದ್ರಿಯೈರ್ವಿಶ್ವಂ ಚಿತ್ಕ್ರಿಯಾಲಿಙ್ಗರೂಪಕಮ್ " ಇತ್ಯಾದಿ ಪ್ರಮಾಣ ವಚನಗಳಿರುವುದರಿಂದ ಸಕಲ ಜಗದ್ರೂಪಮಾದದ್ದು. ಎಂಬಲ್ಲಿ ಸಾಕ್ಷಿಯು.—

" ಪೀಠಿಕಾ ಪರಮಾಶಕ್ತಿರ್ಲಿಙ್ಗಂ ಸಾಕ್ಷಾತ್ಪರಶ್ಶಿವಃ ||
ಶಿವಶಕ್ತಿಸಮಾಯೋಗೋ ವಿಶ್ವಂ ಲಿಙ್ಗಂ ತದುಚ್ಯತೇ "

ಈ ಪ್ರಕಾರಮಾದ ಮಹಾಲಿಙ್ಗಮಂ " ತವ ಪ್ರಿಯೋ ಮಹೇಶೋ ಮ

ರ್ದಯನ್ತ '' ಎಂಬ ಶ್ರುತಿಪ್ರಮಾಣದಿಂದ ಬ್ರಹ್ಮಾದಿದೇವತೆಗಳೂ, ಶೌನಕ ಮೊದ ಲಾದ ಋಷಿಗಳೂ ಪೂಜಿಸಿ, ತಂತಮ್ಮ ಲೋಕಂಗಳಂ ಪಡೆದರೆಂಬಲ್ಲಿ ಸಾಕ್ಷಿಯು.-

" ಬ್ರಹ್ಮಾದಯಸ್ಸುರಾಸ್ಸರ್ವೇ ಮುನಯಶ್ಶೌನಕಾದಯಃ ||
ಶಿವಲಿಙ್ಗಾರ್ಚನಾದೇವ ಸ್ವಂಸ್ವಂ ಪದಮವಾಪ್ನುಯುಃ''

ಶಿವನಿಗೆ ವಿಶ್ವಾಧಿಕತ್ವಾದಿ ಮಹದೈಶ್ವರ್ಯವು-ಮತ್ತೊಬ್ಬ ಮಹಾಪುರುಷನ ಪೂಜೆಯಿಂದುಂಟಾಯಿತೋ ? ಎಂದರೆ, " ವಿಶ್ವಾಧಿಕೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ ಪೂರ್ವಮ್''—" ನತತ್ಸಮಶ್ಚಾಪ್ಯಧಿಕಶ್ಚದೃಶ್ಯತೇ'' ಎಂಬ ಶ್ವೇತಾಶ್ವತರಶ್ರುತಿವಚನಗಳಿರುವುದರಿಂದ ಲಿಙ್ಗಮೂರ್ತಿಯಾದ ಪರಮೇಶ್ವರ ನಿಗೆ ವಿಶ್ವಾಧಿಕತ್ವ ವಿಶ್ವಸೇವ್ಯತ್ವ ಮೊದಲಾದವುಗಳು ಸ್ವಾಭಾವಿಕವೆಂದೂ, ಮಿಕ್ಕ ದೇವತೆಗಳಿಗಿಲ್ಲವೆಂದೂ ನಿಶ್ಚಯವಾದ ಶ್ರುತಿಯು ಹೇಳುತ್ತಿಹುದು. ಎಂಬಲ್ಲಿ ಸಾಕ್ಷಿಯು.-

" ವಿಶ್ವಾಧಿಕತ್ವಮೀಶಸ್ಯ ಲಿಙ್ಗಮೂರ್ತೇಸ್ಸ್ವಭಾವತಃ ||
ಅನನ್ಯದೇವಸಾದೃಶ್ಯಂ ಶ್ರುತಿರಾಹ ಸನಾತನೀ ''

ಮಹಾಲಿಙ್ಗವು-ಸ್ಥೂಲವೆಂದೂ ಸೂಕ್ಷ್ಮವೆಂದೂ ಪರಾತ್ಪರವೆಂದೂ ಮೂರು ವಿಧವಾಗಿಹುದು. ಅವುಗಳಲ್ಲಿ ಯಾವಲಿಙ್ಗವು ಬಾಹ್ಯಶರೀರದಲ್ಲಿ ಧರಿಸಲ್ಪಡುತ್ತ ದೆಯೋ, ಅದು ಇಷ್ಟಲಿಙ್ಗವೆಂದೆನಿಸಿಕೊಳ್ಳುವುದು. ಯಾವ ಲಿಙ್ಗವು ಹೃದಯಕ ಮಲದಲ್ಲಿ ಸನ್ಮಾತ್ರಭಾವನಾಮಯವಾಗಿರುವುದೋ, ಅದು ಪ್ರಾಣಲಿಂಗವೆಂದೆನಿಸಿ ಕೊಳ್ಳುವುದು. ಯಾವ ಲಿಙ್ಗವು ಕಾರಣಾಙ್ಗದಲ್ಲಿ ಭಾವಗ್ರಾಹ್ಯವಾಗಿ ಪರಾತ್ಪರ ವೆಂದು ಹೇಳಲ್ಪಡುತ್ತದೆಯೋ, ಅದು ತೃಪ್ತಿಲಿಙ್ಗವೆಂದು ಹೇಳಲ್ಪಡುತ್ತದೆ. ಎಂಬಲ್ಲಿ ಸಾಕ್ಷಿಯು.—

" ಲಿಙ್ಗಸ್ತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಮ್
ಇಷ್ಟಲಿಙ್ಗಮಿದಂ ಸ್ಥೂಲಂ ತದ್ಬಹಿರ್ಧಾರಯೇತ್ತನಾ ||
ಪ್ರಾಣಲಿಙ್ಗಸ್ತು ತತ್ಸೂಕ್ಷ್ಮಂ ಹೃದನ್ತರ್ಭಾವನಾಮಯಮ್ ||
ಪರಾತ್ಪರಸ್ತು ಯತ್ಪ್ರೋಕ್ತಂ ತೃಪ್ತಿಲಿಙ್ಗಂ ತದುಚ್ಯತೇ ''

ರೂಪಾದಿಗಳಿಲ್ಲದುದರಿಂದ ಬಾಹ್ಯೇಂದ್ರಿಯಗಳಿಗೆ ಗೋಚರವಲ್ಲದುದೂ, ಅಣ ಮಾದಿಮಲಸಹಿತಮಾದ ಅನ್ತಃಕರಣವೃತ್ತಿಗೆ ಅಗೋಚರವಲ್ಲದುದರಿಂದ ಭಾವನಾ ತೀತವೂ, ನಿಗಮಾಗಮಪ್ರಸಿದ್ಧವೂ ಆದ ಶಿವನೆಂಬ ಹೆಸರುಳ್ಳ ಪರಬ್ರಹ್ಮವೇ-ದುರ ದೃಷ್ಟಂಗಳಂ ಪರಿಹರಿಸಿ ಭೋಗಮೋಕ್ಷಂಗಳ ನೀವುದರತ್ತಣಿಂ, " ಇಷ್ಟಮೂ ರ್ಜಂ ತಪಸಾನುಯಚ್ಛತಿ '' ಎಂಬ ಅಥರ್ವಶಿರಶ್ರುತ್ಯನುಸಾರಮಾಗಿ ಪ್ರಸಿದ್ಧ

ಮಾದ ಇಷ್ಟಲಿಙ್ಗರೂಪವನ್ನು ಹೊಂದಿರುವುದರಿಂದ, ಆ ಇಷ್ಟಲಿಙ್ಗವನ್ನು ನಿಗಮಾಗಮಾರ್ಥವಂ ಬಲ್ಲವನು ಎಚ್ಚರಿಕೆಯಿಂದ ಬಾಹ್ಯಶರೀರದಲ್ಲಿ ಯಾವಾಗಲೂ ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

"ಭಾವನಾತೀತಮವ್ಯಕ್ತಂ ಪರಬ್ರಹ್ಮ ಶಿವಾಭಿಧಮ್ ||
ಇಷ್ಟಲಿಙ್ಗಮಿದಂ ಸಾಕ್ಷಾದನಿಷ್ಟಪರಿಹಾರಕಮ್ ||
ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ"

ವೇದಗಳಲ್ಲೂ, ಶಾಸ್ತ್ರಗಳಲ್ಲೂ, ಪುರಾಣಂಗಳಲ್ಲೂ, ಕಾಮಿಕ ಮೊದಲಾದ ಆಗಮಗಳಲ್ಲೂ ವೀರಶೈವನಿಗೆ ನಿಶ್ಚಯದಿಂ ಲಿಙ್ಗಧಾರಣವು ಹೇಳಲ್ಪಟ್ಟಿತು. ಲಿಙ್ಗಧಾರಿಯು—ಯಾವಾಗಲೂ ಸ್ನಾನಾದಿಗಳಿಂ ಪರಿಶುದ್ಧನಾಗಿ, ಮನೋಹರವಾದ ತನ್ನಿಷ್ಟಲಿಙ್ಗವನ್ನು ಹಸ್ತಪೀಠದಲ್ಲಿರಿಸಿಕೊಂಡು ಸ್ಥಿರಚಿತ್ತನಾಗಿ ಗನ್ಧ, ಅಕ್ಷತೆ, ಪುಷ್ಪ ಮೊದಲಾದ ದ್ರವ್ಯಗಳಿಂದ ಪೂಜಿಸಬೇಕು. ಮೋಕ್ಷಾಭಿಲಾಷಿಗಳಾದ ಸಮಸ್ತ ವೀರಶೈವಮತಸ್ಥರು—ಇಷ್ಟಲಿಙ್ಗವನ್ನು ದಾರುಪೀಠ ಮೊದಲಾದ ಬಾಹ್ಯಪೀಠದಲ್ಲಿಟ್ಟು ಪೂಜಿಸದೆ ಯಾವಾಗಲೂ ಕರಪೀಠದಲ್ಲಿರಿಸಿ ಪೂಜಿಸತಕ್ಕುದು ಶ್ರೇಷ್ಠವಾದುದು ಎಂಬಲ್ಲಿ ಸಾಕ್ಷಿಯು.—

"ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ ||
ಲಿಙ್ಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ||
ಲಿಙ್ಗಧಾರೀ ಸದಾಶುದ್ಧೋ ನಿಜಲಿಙ್ಗಂ ಮನೋರಮಮ್ ||
ಅರ್ಚಯೇದ್ಗನ್ಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ||
ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ಪರಮ್ ||
ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರನ್ತರಮ್"

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ, ಗೌತಮ ಮೊದಲಾದ ಮುನಿಗಳೂ ಯಾವಾಗಲೂ ಶಿರಸ್ಸಿನಲ್ಲಿ ವಿಶೇಷವಾಗಿ ಲಿಙ್ಗವನ್ನು ಧರಿಸುತ್ತಿರುವರು. ಲಕ್ಷ್ಮೀ ಮೊದಲಾದ ಶಕ್ತಿಗಳು ವಿಶೇಷವಾದ ಶಿವಭಕ್ತಿಯಿಂ ಕೂಡಿದವರಾಗಿ ಶಿವಲಿಙ್ಗವನ್ನು ಹಗಲಿರುಳುಗಳಲ್ಲಿಯೂ ಲಲಾಟಾಗ್ರದಲ್ಲಿ ಧರಿಸುತ್ತಿರುವರು. ಎಂಬಲ್ಲಿ ಸಾಕ್ಷಿಯು.—

"ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ ||
ಧಾರಯನ್ತಿ ಸದಾ ಲಿಙ್ಗಮುತ್ತಮಾಂಗೇ ವಿಶೇಷತಃ ||
ಲಕ್ಷ್ಮ್ಯಾದಿಶಕ್ತಯಸ್ಸರ್ವಾಶ್ಶಿವಭಕ್ತಿವಿಭಾವಿತಾಃ ||
ಧಾರಯನ್ತ್ಯಲಿಕಾಗ್ರೇಷು ಶಿವಲಿಙ್ಗಮಹರ್ನಿಶಮ್"

ಸೃಷ್ಟಿಕರ್ತನಾದ ಬ್ರಹ್ಮನಿಗೆ ಒಡೆಯನಾದ ಶಿವನೇ—ಪರಬ್ರಹ್ಮವು, ಆದ್ದು ಲಿಙ್ಗವೆಂದು ಪೂರ್ವದಲ್ಲಿಯೇ ಹೇಳಲ್ಪಟ್ಟಿತು, ಆ ಲಿಙ್ಗವು—ಪವಿತ್ರವೆಂದು ಪ್ರಸಿದ್ಧವಾದುದರಿಂದ, ಅದರ ಸಮ್ಪರ್ಕದತ್ತಣಿಂ ಶರೀರವು ಪವಿತ್ರವಹುದು. ಎಂಬಲ್ಲಿ ಸಾಕ್ಷಿಯು.—

“ ಬ್ರಹ್ಮೇತಿ ಲಿಙ್ಗಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ ||
ಪವಿತ್ರಂ ತದ್ಧಿ ವಿಖ್ಯಾತಂ ತತ್ಸಮ್ಪರ್ಕಾತ್ತನುಶ್ಶುಚಿಃ ”

ಪವಿತ್ರವೆಂದು ಯಾವ ಶ್ರುತಿಯಲ್ಲಿ ಪ್ರಸಿದ್ಧವಾಗಿರುವುದೆಂದರೆ “ಪವಿತ್ರನ್ತೇ ವಿತತಂ ಬ್ರಹ್ಮಣಸ್ಪತೇ” ಎಂದು ಋಗ್ವೇದಶ್ರುತಿಯು ಹೇಳುತ್ತಿಹುದು. ಈ ಶ್ರುತಿಯ ಅರ್ಥವು. ಹೇ ಬ್ರಹ್ಮಣಸ್ಪತೇ—ಬ್ರಹ್ಮನಿಗಧಿಪತಿಯಾದೆಲೈ ಶಿವನೇ! ತೇ-ನಿನ್ನ, ಪವಿತ್ರಂ-ಲಿಙ್ಗವು, ವಿತತಂ-ಶಿವಾದಿಭೂಮ್ಯನ್ತವಾಗಿ ಪ್ರಸರಿಸಲ್ಪಟ್ಟದ್ದು, ಪಾವನವಾದದ್ದು, ಆ ಕಾರಣದಿಂದ ದೋಷರಹಿತಮಾದ ಆ ಶಿವಲಿಙ್ಗವು ಧರಿಸಲ್ಪತಕ್ಕುದು. ಎಂಬಲ್ಲಿ ಸಾಕ್ಷಿಯು.—

“ ಋಗಿತ್ಯಾಹ ಪವಿತ್ರನ್ತೇ ವಿತತಂ ಬ್ರಹ್ಮಣಸ್ಪತೇ ||
ತಸ್ಮಾತ್ಪವಿತ್ರಂ ತಲ್ಲಿಙ್ಗಂ ಧಾರ್ಯಂ ಶೈವಮನಾಮಯಮ್ ”

“ ಅತಪ್ತತನೂರ್ನತದಾಮೋಽಶ್ನುತೇ ” ಎಂಬ ಋಗ್ವೇದಶ್ರುತಿಯುಂಟಾಗಿ ತಪೋರಹಿತಶರೀರಮುಳ್ಳವನೂ ನಿತ್ಯಾನಿತ್ಯವಸ್ತು ವಿವೇಕವಿಲ್ಲದವನೂ, ವೈರಾಗ್ಯವಿಲ್ಲದುದರಿಂದ ಪರಿಪಕ್ವಮಾದ ಮನಸ್ಸಿಲ್ಲದವನೂ, ಉಪನಯನಪ್ರತ್ಯಾಮ್ನಾಯವಾದ ದೀಕ್ಷಾಸಂಸ್ಕಾರವಿಲ್ಲದವನೂ ಆದವನು ಶಿವಲಿಙ್ಗವಂ ಧರಿಸಲಾಗದು. ಎಂಬಲ್ಲಿ ಸಾಕ್ಷಿಯು.—

“ ಅತಪ್ತತನುರಜ್ಞೋ ವೈ ಅಮಸ್ಸಂಸ್ಕಾರವರ್ಜಿತಃ ||
ದೀಕ್ಷಯಾ ರಹಿತಸ್ಸಾಕ್ಷಾನ್ನಾಪ್ನುಯಾಲ್ಲಿಙ್ಗಮುತ್ತಮಮ್ ”

ಮತ್ತಂ, ಎಲೈ ರುದ್ರಮೂರ್ತಿಯಾದ ಶಿವನೇ! ಭಯರಹಿತವೂ, ಮಙ್ಗಳಸ್ವರೂಪವೂ ಆದ ಯಾವ ನಿನ್ನ ಶರೀರವು ಪಾಪರಹಿತರಲ್ಲಿ ಪ್ರಕಾಶಿಸುವುದೆಂದು “ ಯಾ ತೇ ರುದ್ರ! ಶಿವಾ ತನೂ ರಘೋರಾಽಪಾಪಕಾಶಿನೀ ” ಎಂಬ ಯಾಜುಷಶ್ರುತಿಯಿಂ ಹೊಗಳಲ್ಪಡುತ್ತಿರುವುದರಿಂದ, ಶಿವಲಿಙ್ಗಸಮ್ಬನ್ಧಿಯು-ಪಾಪವರ್ಜಿತನಾಗಿರುತ್ತಾನೆ. ಎಂಬಲ್ಲಿ ಸಾಕ್ಷಿಯು.—

“ ಅಘೋರಾಽಪಾಪಕಾಶೀತಿ ಯಾತೇ ರುದ್ರ! ಶಿವಾತನೂಃ ||
ಯಜುಷಾ ಗೀಯತೇ ಯಸ್ಮಾತ್ತಸ್ಮಾಚ್ಛೈವೋಽಘವರ್ಜಿತಃ ”

ಇತಿ ಶ್ರೀಮತ್ಪರಶಿವ ಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲ ಜ್ಞಾನ ವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದ ವಾಕ್ಯಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವ ಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾ ಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿ ಯೊಳ್ ಅಷ್ಟಾವರಣ ಪ್ರಕರಣದಲ್ಲಿ ಲಿಙ್ಗ ಸ್ಥಲನಿರೂಪಣಮ್.



|| ಶ್ರೀಃ ||

ಸರ್ವವಿದ್ಯಾಧಿಪತಯೇ ಶಿವಾಯ ನಮಃ

## ಜಙ್ಗಮಸ್ಥಲಮ್.

---

ಜಙ್ಗಮನ ಲಕ್ಷಣವಂ ನಿರೂಪಿಸುವೆನದೆಂತನೆ.—

ಬುದ್ಧಿಶಾಲಿಯಾದ ಶಿವಭಕ್ತನಿಗೆ–ಗುರುವಿನಲ್ಲಿಯೂ ಲಿಙ್ಗದಲ್ಲಿಯೂ ಭಕ್ತಿಯಿರುವಂತೆ ಜಙ್ಗಮನಲ್ಲಿಯೂ ಭಕ್ತಿಯಿರಬೇಕು. ಎಂಬಲ್ಲಿ ಸಾಕ್ಷಿಯು.—

"ಯಥಾ ಗುರೌ ಯಥಾ ಲಿಂಗೇ ಭಕ್ತಿರ್ಮಾರ್ಗ ಪರಿವರ್ತತೇ ||
ಜಙ್ಗಮೇ ಚ ತಥಾ ನಿತ್ಯಂ ಭಕ್ತಿಂ ಕುರ್ಯಾದ್ವಿಚಕ್ಷಣಃ"

ಭಕ್ತಿಸಿದ್ಧ್ಯರ್ಥಮಾಗಿ ಶಿವನೇ ಗುರುರೂಪದಿಂದವತರಿಸಿದನೆಂದು ನಿರೂಪಿಸಿರುವುದರಿಂ ಶಿವನಂತೆ ಗುರುವು ಪೂಜ್ಯನಾಗಲಿ, ಜಙ್ಗಮನನ್ನು ಏಸುಕಾರಣದಿಂ ಶಿವನನ್ನೋಪಾದಿಯಲ್ಲಿ ಪೂಜಿಸಬೇಕೆಂದರೆ, "ಅತೋಽಸ್ಮಿನ್ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ" ಎಂಬ ಗೀತಾವಚನದಿಂ ಲೋಕವೇದ ಪ್ರಸಿದ್ಧನೂ, ಸರ್ವರಿಗೂ ಹಿತವನ್ನೇ ಉಂಟುಮಾಡತಕ್ಕವನೂ, ಸ್ವತನ್ತ್ರನೂ ಆದ ಶಿವನೊಬ್ಬನೇ–ಗುರುಲಿಙ್ಗ ಜಙ್ಗಮಸ್ವರೂಪನಾಗಿ ಭೋಗಮೋಕ್ಷಗಳಂ ಕೊಡುತ್ತಿರುಪನು. ಆ ಕಾರಣದಿಂ ಶಿವನಲ್ಲೋಪಾದಿಯಲ್ಲಿ ಜಙ್ಗಮನಲ್ಲಿಯೂ ಭಕ್ತಿಯಂ ಮಾಡತಕ್ಕುದು. ಎಂಬಲ್ಲಿ ಸಾಕ್ಷಿಯು.—

"ಏಕಏವ ಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ ||
ಗುರುಜಙ್ಗಮಲಿಙ್ಗಾತ್ಮಾ ವರ್ತತೇ ಭುಕ್ತಿಮುಕ್ತಿದಃ"

ಮತ್ತಂ, ಲಿಙ್ಗವು—ಸ್ಥಿರ ಚರಭೇದದಿಂ ದ್ವಿವಿಧವಾಗಿ ಹೇಳಲ್ಪಟ್ಟಿತು. ಸ್ಥಿರ ಲಿಙ್ಗದಲ್ಲಿರುವಂತೆ ಚರಲಿಙ್ಗದಲ್ಲಿಯೂ ಭಕ್ತಿಯಿರಬೇಕು. ಎಂಬಲ್ಲಿ ಸಾಕ್ಷಿಯು.—

" ಲಿಙ್ಗನ್ತು ದ್ವಿವಿಧಂ ಪ್ರೋಕ್ತಂ ಜಙ್ಗಮಾಜಙ್ಗಮಾತ್ಮನಾ ||
ಅಜಙ್ಗಮೇ ಯಥಾ ಭಕ್ತಿಃ ಜಙ್ಗಮೇ ಚ ತಥಾಸ್ಮೃತಾ "

ಸ್ಥಿತಲಿಙ್ಗವೂ, ಜಙ್ಗಮಲಿಙ್ಗವೂ ಸಮಾನವಾದರೆ, ಈ ಜಙ್ಗಮಮೂರ್ತಿಯು ಶಿವಲಿಙ್ಗವನ್ನು ಭಕ್ತಿಯಿಂದ ಪೂಜಿಸತಕ್ಕುದು ಸಮ್ಭವಿಸುವುದಿಲ್ಲವೆಂಡರೆ " ಜ್ಯೇಷ್ಠಭ್ರಾತಾ ಪಿತೃಸಮಃ " ಎಂಬಲ್ಲಿ ತಾನು ತನ್ನ ಕನಿಷ್ಠ ಭ್ರಾತೃವಿಗೆ ಪಿತೃಸಮಾನನೆಂದು, ಆ ಕನಿಷ್ಠನಿಂ ಭಾವಿಸಲ್ಪಡುವನಲ್ಲದೆ, ತಾನು—ತನ್ನ ಮಾತೃವಿಗೆ ಪತಿಯು ಹ್ಯಾಗೆ ಆಗುವುದಿಲ್ಲವೋ, ಮತ್ತು " ಜನಕಶ್ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ || ಶ್ವಶುರಶ್ಚೈವ ರಾಜಾ ಚ ಪಂಚೈತೇ ಪಿತರಸ್ಸ್ಮೃತಾಃ " ತಂದೆಯು, ಶಿವದೀಕ್ಷಾರೂಪವಾದ ಉಪನಯನವಂ ಮಾಡಿದವನು, ವಿದ್ಯೆಯಂ ಕೊಟ್ಟವನು, ಮಾವನು, ದೊರೆಯು, ಈ ಐದು ಜನರು ತಂದೆಗಳು ಎಂದು ಭಾವಿಸತಕ್ಕವನಿಗೆ ಜನಕನಂತೆ ಮಿಕ್ಕ ನಾಲ್ಕು ಜನರು ಅವನ ತಾಯಿಗೆ ಪತಿಗಳು ಹ್ಯಾಗೆ ಆಗುವುದಿಲ್ಲವೋ, ಮತ್ತಂ " ಭ್ರಾತೃಪತ್ನೀ ಗುರೋಃ ಪತ್ನೀ ರಾಜಪತ್ನೀ ತಥೈವ ಚ || ಪತ್ನೀಮಾತಾ ಚಾತ್ಮಮಾತಾ ಪಂಚೈತಾ ಮಾತರಸ್ಸ್ಮೃತಾಃ " ಎಂಬ ವಚನದಿಂ ಮಗನಿಗೆ ಅಣ್ಣನ ಹೆಂಡತಿ, ಗುರುವಿನ ಹೆಂಡತಿ, ದೊರೆಯ ಹೆಂಡತಿ, ಹೆಂಡತಿಯ ತಾಯಿ ಈ ನಾಲ್ವರು ತಾಯಿಯಂತೆ ಆದರೆ ಆ ಮಗನ ತಂದೆಯು ಇವರಲ್ಲಿ ಪ್ರವರ್ತಿಸಬೇಕಾದೀತು, ಮತ್ತೂ ಅವರವರ ಪತಿಗಳು ಪರಸ್ಪರವಾಗಿ ಅವರವರಲ್ಲಿ ಪ್ರವರ್ತಿಸಬೇಕಾದೀತು, ಆದ್ದರಿಂದ ಮಗನಿಂದ ಈ ನಾಲ್ವರೂ ತನ್ನ ಮಾತೃವಿಗೆ ಸಮಾನರೆಂದು ಭಾವಿಸುವುದಕ್ಕೆ ಯೋಗ್ಯರಲ್ಲದೆ ಅನ್ಯಥಾ ಹ್ಯಾಗೆ ಅಲ್ಲವೋ, ಮತ್ತಂ ಈ ದೊರೆಯು " ಸಾಕ್ಷಾದಿನ್ದ್ರನು " ಎಂಬುದರಿಂ ದೊರೆಯು ಶಚೀದೇವಿಗೆ ಹ್ಯಾಗೆ ಪತಿಯಲ್ಲವೋ, ಮತ್ತಂ " ರಾಜಾ ಪಿತಾ ಹಿ ಜಗತಃ " ಎಂಬ ವಚನದಿಂ ದೊರೆಯು ತನ್ನ ರಾಷ್ಟ್ರಕ್ಕೆ ತಂದೆಯು ಎಂದು ಹೇಳಲ್ಪಟ್ಟಿರುವ ಮಾತ್ರದಿಂದ ಆತನು ತನ್ನ ರಾಷ್ಟ್ರದಲ್ಲಿರತಕ್ಕ ಸ್ತ್ರೀಯರೆಲ್ಲರಿಗೂ ಗಂಡನಾದರೆ ಲೋಕಮರ್ಯಾದೆಗೆ ವಿಚ್ಛಿತ್ತಿಯು ಸಂಭವಿಸುವುದು. ಪ್ರಕೃತಸಂದರ್ಭದಲ್ಲಾದರೋ, ಪೂಜಕನಾದ ಭಕ್ತನಿಂದ ಗುರುವೂ ಜಂಗಮನೂ ಶಿವಸಮಾನನೆಂದು ತಿಳಿಯಲ್ಪಡಬೇಕಲ್ಲದೆ; ಗುರುಜಂಗಮರು ತಮ್ಮನ್ನು ತಾವೇ ಅಧಿಕರನ್ನಾಗಿ ತಿಳಿಯಕೂಡದು. ಆದ್ದರಿಂದಲೇ "ಗುರುಭಕ್ತಿಶ್ಚ ದೇವಭಕ್ತಿಶ್ಚ ವಧ್ಯಾನರತಾತ್ಮತಾ || ನಿತ್ಯಮಭ್ಯಾಸಯೋಗಶ್ಚ ಯಸ್ಯ ಸ್ಯಾಜ್ಜಂ

ಗಮೋತ್ತಮಃ'' ಎಂದೂ, "ಜ್ಞಾನಂ ಶಿವಮಯಂ ಭಕ್ತಿಶ್ಚೈವೀ ಧ್ಯಾನಂ ಶಿವಾತ್ಮಕಂ || ಶಿವವ್ರತಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ'' ಎಂದೂ ಶಿವಾಗಮವಚನವಿರುವುದರಿಂದ, ಜಂಗಮನು—ತನ್ನನ್ನು ತಾನು ಭಕ್ತನನ್ನಾಗಿ ತಿಳಿಯಬೇಕು. ಸ್ಥಿರಲಿಙ್ಗ ಜಙ್ಗಮಲಿಙ್ಗಗಳಿಗೆ ಸಮಾನತೆಯನ್ನು ಹೇಳತಕ್ಕ ವಚನಗಳು ಸ್ತುತಿಪರವಾದವುಗಳೆಂದು ಅಭಿಜ್ಞರು ತಿಳಿಯುತ್ತಾರೆ. ಈ ವಿಷಯದಲ್ಲಿ ಹೇಳಬೇಕಾದುದು ಬಹಳವಾಗಿದ್ದಾಗ್ಯೂ ಗ್ರನ್ಥವಿಸ್ತರ ಭೀತಿಯಿಂದ ವಿರಮಿಸಿ ಪ್ರಕೃತಸರಣಿಯನ್ನನುಸರಿಸುತ್ತೇವೆ.

ಶಿವಯೋಗಿಯಾದ ಜಂಗಮನನ್ನು ಪ್ರತ್ಯಕ್ಷ ಶಿವನನ್ನಾಗಿ ಭಾವಿಸಿ ಭಕ್ತಿಪೂರ್ವಕವಾಗಿ ಗುರುವನ್ನೂ ಲಿಙ್ಗವನ್ನೂ ಪೂಜಿಸುವಂತೆ ಪೂಜಿಸಲೇಬೇಕೆಂಬಲ್ಲಿ ಸಾಕ್ಷಿಯು.—

"ಶಿವಯೋಗೀ ಶಿವಸ್ಸಾಕ್ಷಾದಿತಿ ಕೈಙ್ಕರ್ಯಭಾವತಃ ||
ಪೂಜಯೇದಾದರೇಣೈವ ಯಥಾಲಿಙ್ಗಂಯಥಾಗುರುಮ್''

ಜಂಗಮತ್ವವು ಸಂಸ್ಕಾರದಿಂದುಂಟಾಗತಕ್ಕುದಲ್ಲವು. ಶಾಸ್ತ್ರಾಧ್ಯಯನವಂ ಮಾಡಿ ಶಿವತತ್ವವಿವೇಕಸಂಪನ್ನತೆಯಿಂ ಜಂಗಮತ್ವವುಂಟಾಗುವುದು, ಜಂಗಮ ಮಾಹಾತ್ಮ್ಯಪೂರ್ವಕಮಾಗಿ ತತ್ಸ್ವರೂಪಮಂ ನಿರೂಪಿಸುವೆನದೆಂತನೆ "ಆಚಾರ್ಯಃ ಪೂರ್ವರೂಪಮನ್ತೇವಾಸ್ಯುತ್ತರರೂಪಂ ವಿದ್ಯಾ ಸನ್ಧಿಃ'' ಎಂದು ಶ್ರುತಿಯಿರುವುದರಿಂದ ಗುರುಶಿಷ್ಯ ಮಧ್ಯಗತ ಶಿವಲಿಂಗದ ಮಹತ್ತ್ವಸಮ್ಪತ್ತಿಯತ್ತಣಿಂ ಸಕಲ ಪ್ರಪಂಚವೂ ಚಿತ್ಕ್ರಿಯಾರೂಪಮೆಂಬ ಜ್ಞಾನದ ದೆಸೆಯಿಂ ಜಂಗಮಾಧಿಕ್ಯವು ಹೇಳಲ್ಪಡುತ್ತದೆ. ಮುಖ್ಯಾರ್ಥಮೇನೆನೆ, ಗುರುಶಿಷ್ಯರ ಇಷ್ಟಪ್ರಾಣಭಾವಂಗಳಲ್ಲಿ ತಾದಾತ್ಮ್ಯಭಾವನೆಯಿಂದಾರೂಢಮಾದ ಲಿಂಗಮಹತ್ತ್ವಸಂಪತ್ತಿಯಿಂ ಸಕಲ ವಿಶ್ವವು-ಶಿವಶಕ್ತ್ಯಾತ್ಮಕಮೆಂಬ ಜ್ಞಾನದಿಂ ಜಂಗಮಾಧಿಕ್ಯವೆಂಬರ್ಥದಲ್ಲಿ ಸಾಕ್ಷಿಯು.—

"ಗುರುಶಿಷ್ಯಸಮಾರೂಢ ಲಿಙ್ಗಮಾಹಾತ್ಮ್ಯಸಮ್ಪದಃ ||
ಸರ್ವಂ ಚಿದ್ರೂಪವಿಜ್ಞಾನಾಜ್ಜಙ್ಗಮಾಧಿಕ್ಯಮುಚ್ಯತೇ''

ಯಾರು-ಮಾಯಾಕಾರ್ಯಕೋಟಿಗೆ ಸೇರಿದ ಸಕಲ ಪದಾರ್ಥಂಗಳನ್ನೂ ಅನಿತ್ಯಗಳನ್ನಾಗಿಯೂ "ತಸ್ಯಭಾಸಾ ಸರ್ವಮಿದಂ ವಿಭಾತಿ'' ಎಂಬ ಶ್ರುತಿಪ್ರಮಾಣದಿಂದ ತನ್ನ ಚಿತ್ಕ್ರಿಯಾಶಕ್ತಿಗಳಿಂ ವಿಶ್ವಪ್ರಕಾಶಕನಾದ ಶಿವನನ್ನು ಜ್ಞಾತೃತ್ವ ಕರ್ತೃತ್ವಸ್ವಭಾವವುಳ್ಳವನನ್ನಾಗಿಯೂ ತಿಳಿದು, ಶಿವನೇ ತಾನೆಂಬ ದೃಢನಿಶ್ಚಯದಿಂ ಸ್ವಸ್ವರೂಪಜ್ಞಾನವುಳ್ಳವನೇ ಜಂಗಮನು. ಎಂಬಲ್ಲಿ ಸಾಕ್ಷಿಯು.—

" ಜ್ಞಾನಸ್ತ್ಯತಿಶಯಾದ್ಯೇ ತು ಶಿವಂ ವಿಶ್ವಪ್ರಕಾಶಕಮ್ ||
ಸ್ವಸ್ವರೂಪತಯಾ ತೇ ತು ಜಙ್ಗಮಾ ಇತಿ ಕೀರ್ತಿತಾಃ "

ಮತ್ತಂ, ಕೂಡಹಲ್ಪಟ್ಟ ಮಲತ್ರಯದ ಸೋಂಕಳನುಳ್ಳವರಾಗಿ ಶಿವಯೋಗದ ದೆಸೆಯಿಂದ ಈ ವಿಶ್ವವು-ಶಿವಸಂಬಂಧವುಳ್ಳುದಾದುದರಿಂ ಈ ಪ್ರಪಂಚಕ್ಕೂ, ಬ್ರಹ್ಮಕ್ಕೂ ಸಂಯೋಗ ಸಂಬಂಧವು ಕೂಡದೆಂಬು ಖಂಡಿಸಿರುವಕಾರಣದಿಂ ತಾದಾತ್ಮ್ಯಸ ನಂಗೀಕರಿಸಬೇಕಾಗಿ, ಶಿವಸ್ವರೂಪವಾದದ್ದೇ ಸರಿಯೆಂದು ತಿಳಿದಿರುವವರು ಜಂಗಮ ರಾದ ಶಿವಯೋಗಿಗಳೆಂಬಲ್ಲಿ ಸಾಕ್ಷಿಯು.—

" ಯೇ ಪಶ್ಯನ್ತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ ||
ನಿರೂಢತಮಲಸಂಸ್ಪರ್ಶಾತ್ಸ್ಮೃತಾಸ್ತೇ ಶಿವಯೋಗಿನಃ "

ಮತ್ತಂ, ಭಯಂಕರಮಾದ ಸಂಸಾರವೆಂಬ ಕತ್ತಲೆಯಂ ಕೆಡಿಸುವುದಕ್ಕೆ ಕಾರಣಮಾದ ಶಿವಾಧಿಕ್ಯಜ್ಞಾನವು ಯಾರಿಗುಂಟೋ, ಅವರು-ಜಂಗಮರಾದ ಶಿವಯೋಗಿಗಳು ಎಂಬಲ್ಲಿ ಸಾಕ್ಷಿಯು.—

" ಘೋರ ಸಂಸಾರ ತಿಮಿರಪರಿಧ್ವಂಸನಕಾರಣಮ್ ||
ಯೇಷಾಮಸ್ತಿ ಶಿವಜ್ಞಾನಂ ತೇ ಮತಾಶ್ಶಿವಯೋಗಿನಃ "

ಮತ್ತಂ, ಕಾಮಕ್ರೋಧಗಳಿಲ್ಲದವರೂ, ಅಜ್ಞಾನಗ್ರನ್ಥಿಯಂ ಭೇದಿಸಿದವರೂ ಮಣ್ಣು ಹೆಂಟೆ ಕಲ್ಲು ಚಿನ್ನ ಇವುಗಳಲ್ಲಿ ಸಮಾನಬುದ್ಧಿಯುಳ್ಳವರೂ, ಸಾಧುಗಳೂ, ಶಿವಯೋಗನಿಷ್ಠರೂ, ಶತ್ರುಮಿತ್ರರಲ್ಲಿ ಏಕಪ್ರಕಾರವಾಗಿ ಪ್ರತ್ಯಕ್ಷೀಕರಿಸಲ್ಪಟ್ಟ ಶಿವಸ್ವರೂಪವುಳ್ಳವರೂ, ಇಹಾಮುತ್ರಫಲಭೋಗಗಳಲ್ಲಿ ವೈರಾಗ್ಯವುಳ್ಳವರೂ, ಶರೀರವೇ ನಾನೆಂದು ತಿಳಿಯದವರೂ ಆದವರೇ ಜಂಗಮರಾದ ಶಿವಯೋಗಿಗಳು. ಎಂಬಲ್ಲಿ ಸಾಕ್ಷಿಯು.—

" ಜಿತಕಾಮಾ ಜಿತಕ್ರೋಧಾ ಮೋಹಗ್ರನ್ಥಿವಿಭೇದಿನಃ ||
ಸಮಲೋಷ್ಟಾಶ್ಮ ಕನಕಾಸ್ಸಾಧವಶ್ಶಿವಯೋಗಿನಃ ||
ಸಮಾಶ್ಶತ್ರೌ ಚ ಮಿತ್ರೇ ಚ ಸಾಕ್ಷಾತ್ಕೃತ ಶಿವಾತ್ಮಕಾಃ ||
ನಿಸ್ಪೃಹಾ ನಿರಹಙ್ಕಾರಾ ವರ್ತನ್ತೇ ಶಿವಯೋಗಿನಃ "

ಶಿವನೇ ಅಧಿಕನೆಂಬ ಜ್ಞಾನವು, ಪೂರ್ವದಲ್ಲಿ ಹೇಳಲ್ಪಟ್ಟ ಯುಕ್ತಿಗಳಿಂ ಶಿವಾಭೇದಚಿನ್ತನೆಯು ಈ ಎರಡೂ ದುರ್ಲಭವು. ಅವೆರಡೂ ಯಾರಿಗಿರುತ್ತವೆಯೋ, ಅವರು ಪ್ರತ್ಯಕ್ಷ ಶಿವಸ್ವರೂಪರು. ಎಂಬಲ್ಲಿ ಸಾಕ್ಷಿಯು.—

" ದುರ್ಲಭಂ ಹಿ ಶಿವಜ್ಞಾನಂ ದುರ್ಲಭಂ ಶಿವಚಿನ್ತನಮ್ ||
ಯೇಷಾಮೇತದ್ದ್ವಯಂ ಚಾಸ್ತಿ ತೇ ವೈ ಸಾಕ್ಷಾಚ್ಛಿವಾತ್ಮಕಾಃ "

ನಿವಾರಿಸಲ್ಪಟ್ಟ ಅಹಂಕಾರ ಮಮಕಾರವುಳ್ಳವನಾಗಿ, ಸ್ವರೂಪಜ್ಞಾನಸಮ್ಪನ್ನನಾದ ಸ್ವಯಲಿಂಗಿಯು—ತಾನೇ ತಾನಾಗಿ, ಸಂಚರಿಸುವುದರಿಂ, ಚರಮೂರ್ತಿಯೆಂದೆನಿಸಿಕೊಳ್ಳುವನು. ಎಂಬಲ್ಲಿ ಸಾಕ್ಷಿಯು.—

" ಸ್ವರೂಪಜ್ಞಾನಸಂಪನ್ನೋ ಧ್ವಸ್ತಾಹಂಮಮತಾಕೃತಿಃ ||
ಸ್ವಯಮೇವ ಸ್ವಯಂ ಭಾವಾಚ್ಚರತೀತಿ ಚರಾಭಿಧಃ "

ಆ ಶಿವಯೋಗಿಯಾದ ಚರಮೂರ್ತಿಯು—ಕಾಮಕ್ರೋಧಾದ್ಯರಿಷಡ್ವರ್ಗಶೂನ್ಯನೂ, ಅನ್ತರ್ಬಾಹ್ಯೇನ್ದ್ರಿಯ ನಿಗ್ರಹವುಳ್ಳವನೂ, ಸಕಲ ಪ್ರಪಂಚವೂ ಶಿವಸ್ವರೂಪವಾದದ್ದೆಂಬ ಬುದ್ಧಿಯುಳ್ಳವನೂ, ಶತ್ರುಮಿತ್ರರಲ್ಲಿ ಸಮಾನಬುದ್ಧಿಯುಳ್ಳವನೂ ಆಗಿರುವನು. ಎಂಬಲ್ಲಿ ಸಾಕ್ಷಿಯು.—

" ಕಾಮಕ್ರೋಧಾದಿನಿರ್ಮುಕ್ತಃ ಶಾನ್ತಿದಾನ್ತಿಸಮನ್ವಿತಃ ||
ಸಮಬುದ್ಧ್ಯಾ ಚರೇದ್ಯೋಗೀ ಸರ್ವತ್ರ ಶಿವಬುದ್ಧಿಮಾನ್ "

ಮತ್ತಂ, ತುರ್ಯಸಾಕ್ಷಿಕ ಪ್ರತ್ಯಗಾತ್ಮ ನಿಜಸ್ವರೂಪದಲ್ಲಿ ಇರುತ್ತಿಹ ಶಿವಯೋಗಿಯು—ಸನ್ಮಾನಂಗಳಲ್ಲಿ ಪ್ರೀತಿಯನ್ನೂ, ಅವಮಾನಂಗಳಲ್ಲಿ ದುಃಖವನ್ನೂ ತೋರಿಸದೆ ಸಂಚರಿಸುತ್ತಿರಬೇಕು. ಎಂಬಲ್ಲಿ ಸಾಕ್ಷಿಯು.—

" ನ ಸನ್ಮಾನೇಷು ಸಮ್ಪ್ರೀತಿಂ ನಾವಮಾನೇಷು ಚ ವ್ಯಥಾಮ್ ||
ಕುರ್ವಾಣಸ್ಸಞ್ಚರೇದ್ಯೋಗೀ ಕೂಟಸ್ಥೇ ಸ್ವಾತ್ಮನಿ ಸ್ಥಿತಃ "

ಶಿವಾದ್ವೈತಜ್ಞಾನದಿಂದಾವಿರ್ಭೂತಮಾದ ಪರಮಾನಂದದಿಂ ತುಷ್ಟನಾದ ಶಿವಯೋಗೀಶ್ವರನು—ಮಾಯಾಸಂಬಂಧವಲ್ಲದ ಲೋಕೋತ್ತರಮಾದ ತನ್ನ ಗುಣಗಳಿಂ ಸಮಸ್ತ ಜನವಂ ಆಶ್ಚರ್ಯದೊಡನೆ ಕೂಡಿದವರನ್ನಾಗಿ ಮಾಡಿ, ದೇಹಿಯೋಪಾದಿಯಲ್ಲಿ ಸಂಚರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಅಪ್ರಾಕೃತೈರ್ಗುಣೈಸ್ಸ್ವೀಯೈಸ್ಸರ್ವಂ ವಿಸ್ಮಾಪಯನ್ಜನಮ್ ||
ಅದ್ವೈತಪರಮಾನನ್ದಮುದಿತೋ ದೇಹಿವಚ್ಚರೇತ್ "

ಮತ್ತಂ, ಸಮಸ್ತ ವಿಷಯಗಳಲ್ಲಿ ಮಮಕಾರವಿಲ್ಲದವನೂ, ಶರೀರಾದಿಗಳಲ್ಲಿ ನಾನೆಂಬ ಅಹಂಕಾರಶೂನ್ಯನೂ, ಅವಿದ್ಯಾದಿ ಪಂಚಕ್ಲೇಶರಹಿತನೂ, ಭಿಕ್ಷಾನ್ನಭೋಕ್ತೃವೂ, ಮಣ್ಣು ಹೆಂಟೆ ಪಾಷಾಣ ಸ್ವರ್ಣಂಗಳಲ್ಲಿ ಸಮಬುದ್ಧಿಯುಳ್ಳವನೂ

ಆದ ಶಿವಯೋಗಿಯು— ಚರಮದೇಹಿಯಾಗಿರುವುದರಿಂದ ಪರಮುಕ್ತಸದೃಶನಾಗಿ ಇರಬೇಕು. ಎಂಬಲ್ಲಿ ಸಾಕ್ಷಿಯು.—

"ನಿರ್ಮಮೋ ನಿರಹಙ್ಕಾರೋ ನಿರಸ್ತಕ್ಲೇಶಪಞ್ಜರಃ ||
ಭಿಕ್ಷಾಶೀ ಸಮಬುದ್ಧಿಶ್ಚ ಮುಕ್ತಪ್ರಾಯೋ ಮುನಿರ್ಭವೇತ್"

ಮತ್ತಂ, ಶಿವಯೋಗಿಯು— ಯಥಾಲಾಭಸಂತುಷ್ಟನಾಗಿ, ಭಸ್ಮಸ್ನಾನ ಭಸ್ಮೋದ್ಧೂಳನಾದಿಗಳಲ್ಲಿ ನಿಷ್ಠೆಯುಳ್ಳವನಾಗಿ, ಜಿತೇನ್ದ್ರಿಯನಾಗಿ, ಭಿಕ್ಷುಕನಲ್ಲಿ ಯೂ ರಾಜನಲ್ಲಿಯೂ ಸಮಾನಬುದ್ಧಿಯುಳ್ಳವನಾಗಿ ಇರಬೇಕು. ಎಂಬಲ್ಲಿ ಸಾಕ್ಷಿ ಯು.—

"ಯದೃಚ್ಛಾಲಾಭಸನ್ತುಷ್ಟೋ ಭಸ್ಮನಿಷ್ಠೋ ಜಿತೇನ್ದ್ರಿಯಃ ||
ಸಮವೃತ್ತಿರ್ಭವೇದ್ಯೋಗೀ ಭಿಕ್ಷುಕೇ ವಾ ನೃಪೇಽಥವಾ"

ಶೋಭನವಾದ ಬುದ್ಧಿಯುಳ್ಳವನೂ, ತಾನೇ ಶಿವನೂ ಆದ ಯತಿಯು— ಎಲ್ಲಾ ಸ್ಥಲಗಳಲ್ಲೂ ಸಂಸಾರ ಚಕ್ರದಲ್ಲಿ ಸಂಚರಿಸುತ್ತಿಹ ಸಕಲ ಪ್ರಾಣಿಗಳನ್ನು ನೋಡುತ್ತಾ, ಆಶ್ಚರ್ಯಪಡುವವನಾಗಿ, ಪರಮಾನನ್ದಮಯವಾದ ಮಹಾಲಿಙ್ಗದಲ್ಲಿ ಅಡಗಿದ ಮನಸ್ಸುಳ್ಳವನಾಗಿ ಇರುತ್ತಾನೆ. ಎಂಬಲ್ಲಿ ಸಾಕ್ಷಿಯು.—

"ಪಶ್ಯಂತ್ಸರ್ವಾಣಿ ಭೂತಾನಿ ಸಂಸಾರಸ್ಥಾನಿ ಸರ್ವತಃ ||
ಸ್ಮಯಮಾನಃ ಪರಾನನ್ದೇ ಲೀನಾತ್ಮಾ ವರ್ತತೇ ಸುಧೀಃ"

ಶಿವಾಧಿಕ್ಯಜ್ಞಾನವು, ಶಿವಚಿನ್ತನೆಯು, ಭಿಕ್ಷಾಹಾರವು, ಏಕಾನ್ತವಾಸವು ಈ ನಾಲ್ಕು ಯೋಗಿಗೆ ವಿಹಿತವಾಗಿರುತ್ತವೆ. ಐದನೆಯದು ಇಲ್ಲವು. ಎಂಬಲ್ಲಿ ಸಾಕ್ಷಿಯು.—

"ಧ್ಯಾನಂ ಶೈವಂ ತಥಾ ಜ್ಞಾನಂ ಭಿಕ್ಷಾ ಚೈಕಾನ್ತಶೀಲತಾ ||
ಏತಚ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ"

ಜೀವನ್ಮುಕ್ತನಾದ ಶಿವಯೋಗಿಯು—ನಿತ್ಯನೂ, ನಿರ್ಮಲಸ್ವರೂಪನೂ, ಉಪ ಮಾತೀತನೂ, ನಿವಾರಿಸಲ್ಪಟ್ಟ ಸಮಸ್ತ ದೋಷವುಳ್ಳವನೂ, ಸಚ್ಚಿದಾನನ್ದಸ್ವರೂ ಪನೂ ಆದ ಪರಶಿವನಿಗೆ ಜ್ಞಾತೃತ್ವ ಕರ್ತೃತ್ವಯೋಗದಿಂ ಸಮಾನನಾಗಿ, ನಿವಾರಿಸ ಲ್ಪಟ್ಟ ವರ್ಣಾಶ್ರಮಧರ್ಮವೆಂಬ ಸಂಕೋಲೆಯುಳ್ಳವನೂ, ಸ್ವೇಚ್ಛಾಚಾರಿಯಾದರೂ ಆಶ್ಚರ್ಯಕರವಾದ ಮಹತ್ತ್ವದ ಸಂಪತ್ತಿಯುಳ್ಳವನೂ, ಸರ್ವೋತ್ಕೃಷ್ಟನೂ ಆಗಿರು ತ್ತಾನೆ. ಎಂಬಲ್ಲಿ ಸಾಕ್ಷಿಯು.—

"ನಿತ್ಯೇ ನಿರ್ಮಲಭಾವನೇ ನಿರುಪಮೇ ನಿರ್ಧೂತಸರ್ವಭ್ರಮೇ
ಸತ್ತಾನನ್ದಚಿದಾತ್ಮಕೇ ಪರಶಿವೇ ಸಾಮ್ಯಂಗತಸ್ಸಂಯಮೀ ||
ಪ್ರಧ್ವಸ್ತಾಶ್ರಮವರ್ಣಧರ್ಮನಿಗಳಸ್ಸ್ವಚ್ಛನ್ದಸಞ್ಚಾರವಾ
ದೇಹೀವಾದ್ಭುತವೈಭವೋ ವಿಜಯತೇ ಜೀವನ್ವಿಮುಕ್ತಸ್ಸುಧೀಃ"

ಶಿವಯೋಗಿಗೆ—ದಾರುಮಯವಾದ ಅರಣಿಯಲ್ಲಿ ಅಗ್ನಿಯು ಮನ್ಥನವಿಲ್ಲದೆ ಪ್ರಕಾಶಿಸದಿರುವಂತೆ, ಸದಾಚಾರಗಳಿಂ ಕೂಡಿದ ಪೂಜಾದಿ ಕ್ರಿಯೆಗಳಿಲ್ಲದೆ, ಲಿಙ್ಗ ಮಧ್ಯಸ್ಥನಾದ ಶಿವನು ಪ್ರಕಾಶಮಾನನಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

"ಪ್ರಕಾಶತೇ ಯಥಾನಾಗ್ನಿರರಣ್ಯಾಂ ಮನ್ಥನಂ ವಿನಾ ||
ಕ್ರಿಯಾಂ ವಿನಾ ತಥಾನ್ತಸ್ಥೋ ನ ಪ್ರಕಾಶೋಭವೇಚ್ಛಿವಃ"

ಆ ಪೂಜೆಯು ಎಂತು ಮಾಡಲ್ತಕ್ಕುದೆನೆ.—ಇತಿಕರ್ತವ್ಯತಾ ರೂಪವಾದ ನಿಯಮಕ್ಕೆ ಲೋಪವುಂಟಾದರೆ ಶಿವನು—ಪ್ರಸನ್ನನಾಗುವುದಿಲ್ಲವು, ಶಿವನು ಪ್ರಸನ್ನನಾಗದಿರ್ದೊಡೆ ಆಗಮಕ್ಕೆ—ಅಪ್ರಾಮಾಣ್ಯವು ಸಮ್ಭವಿಸುವುದು, ಆದರಿಂದ ನರಕಮುಂಟಾಗುವುದು. ಆ ಕಾರಣದಿಂ, ವಿಧಿಲೋಪವಾಗದಂತೆಯೂ, ಶಿವನು ಪ್ರಸನ್ನನಾಗುವಂತೆಯೂ, ಆಗಮಪ್ರಾಮಾಣ್ಯಮಪ್ಪಂತೆಯೂ, "ಶಿವಾರ್ಚಾ ಕರ್ಮ ವಿಜ್ಞೇಯಮ್" ಎಂಬ ವಚನದಿಂ ಸಿದ್ಧವಾಗಿರುವ ಇಷ್ಟಲಿಙ್ಗಾರ್ಚನಾರೂಪವಾದ ಕರ್ಮವನ್ನು ಮಾಡಬೇಕು. ಎಂಬಲ್ಲಿ ಸಾಕ್ಷಿಯು.—

"ನ ಯಥಾ ವಿಧಿಲೋಪಸ್ಸ್ಯಾದ್ಯಥಾ ದೇವಃ ಪ್ರಸೀದತಿ ||
ಯಥಾಽಽಗಮಪ್ರಮಾಣಂ ಸ್ಯಾತ್ತಥಾ ಕರ್ಮ ಸಮಾಚರೇತ್"

ಇತಿ ಶ್ರೀಮತ್ಪರಶಿವ ಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲ
ಜ್ಞಾನ ವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದ
ವಾಕ್ಯಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವ
ಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾ
ಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿ
ಯೊಳ್ ಅಷ್ಟಾವರಣ ಪ್ರಕರಣದಲ್ಲಿ ಜಂಗ
ಮಸ್ಥಲನಿರೂಪಣಮ್.



|| ಶ್ರೀಃ ||

ಪರಮೇಶ್ವರಾಯಶಮ್ಭವೇನಮಃ.

# ಭಸ್ಮಸ್ಥಲಮ್.

ಭಸ್ಮಲಕ್ಷಣಾದಿಗಳಂ ನಿರೂಪಿಸುವೆನದೆಂತೆನೆ:—

ಭಸ್ಮಕ್ಕೆ—ಐದು ಕಾರಣಗಳಿಂದ ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ, ಎಂಬೈದು ನಾಮಧೇಯಗಳಿರುತ್ತವೆ ಯೆಂಬಲ್ಲಿ ಸಾಕ್ಷಿಯು.—

" ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ ||
ಏತಾನಿ ಪಞ್ಚ ನಾಮಾನಿ ಹೇತುಭಿಃ ಪಞ್ಚಭಿರ್ಭೃಶಮ್ "

ಈ ಹೆಸರುಗಳ ಸಾರ್ಥಕತೆಯು ಏನೆಂದರೆ,—ಭಸ್ಮವು—ಅಣಿಮಾದ್ಯಷ್ಟೈಶ್ವರ್ಯಗಳಿಗೆ ಕಾರಣಮಾದುದರಿಂ ವಿಭೂತಿಯೆಂದೂ, ಶಿವತತ್ವಪ್ರಕಾಶವಂ ಮಾಡುವುದರಿಂದ ಭಸಿತವೆಂದೂ, ಪಾಪಂಗಳ ನಡಗಿಸುವ ಕಾರಣದಿಂ ಭಸ್ಮವೆಂದೂ, ಕಾಪತ್ರಯೋತ್ಪನ್ನ ವಿಪನ್ನಾಶಕವಾದುದರಿಂ ಕ್ಷಾರವೆಂದೂ, ಗ್ರಹಯಕ್ಷಾದಿ ದುಷ್ಟಪ್ರಾಣಿಗಳ ದೆಸೆಯಿಂದ ರಕ್ಷಿಸುವುದರಿಂ ರಕ್ಷೆಯೆಂದೂ ಹೇಳಲ್ಪಡುತ್ತದೆ. ಎಂಬಲ್ಲಿ ಸಾಕ್ಷಿಯು.—

" ವಿಭೂತಿರ್ಭೂತಿಹೇತುತ್ವಾದ್ಭಸಿತಂ ತತ್ತ್ವಭಾಸನಾತ್ ||
ಪಾಪಾನಾಂ ಭರ್ತ್ಸನಾದ್ಭಸ್ಮ ಕ್ಷಾರಣಾತ್ಕ್ಷಾರಮಾಪದಾಮ್ ||
ರಕ್ಷಣಾತ್ಸರ್ವಭೂತೇಭ್ಯೋ ರಕ್ಷೇತಿ ಪರಿಗೀಯತೇ "

ಈ ಪ್ರಕಾರವಾದ ಭೇದಕ್ಕೆ ಕಾರಣವೇನೆಂದರೆ,—ವ್ಯಾಪಕನಾದ ಶಿವನ—ಸದ್ಯೋಜಾತಮುಖದಿಂ 'ನನ್ದೆ' ಯೆಂಬ ಗೋವು, ವಾಮದೇವ ಮುಖದಿಂ 'ಭದ್ರೆ' ಯೆಂಬ ಗೋವು, ಅಘೋರಮುಖದಿಂ 'ಸುರಭಿ' ಯೆಂಬ ಗೋವು, ತತ್ಪುರುಷ ಮುಖದಿಂ 'ಸುಶೀಲೆ' ಯೆಂಬ ಗೋವು. ಈಶಾನ ಮುಖದಿಂ 'ಸುಮನೆ' ಯೆಂಬ ಗೋವು ಈ ರೀತಿಯಾಗಿ ಪಂಚಮುಖಗಳಿಂ ಪಂಚ ಗೋವುಗಳುದಿಸಿದವು. ಅವುಗಳಿಂದುಂಟಾದುದರಿಂ ನಾಮಭೇದವುಂಟಾಯಿತು. ಎಂಬಲ್ಲಿ ಸಾಕ್ಷಿಯು.—

" ನನ್ದಾ ಭದ್ರಾ ಚ ಸುರಭಿಸ್ಸುಶೀಲಾ ಸುಮನಾಸ್ತಥಾ ||
ಪಞ್ಚ ಗಾವೋ ವಿಭೋರ್ಜಾತಾಸ್ಸದ್ಯೋಜಾತಾದಿ ವಕ್ತ್ರತಃ "

ಈ ಗೋವುಗಳ ಸ್ವರೂಪವೇನೆನೆ.—ನನ್ದೆಯೆಂಬ ಗೋವು ಕಪಿಲವರ್ಣಮುಳ್ಳದ್ದು. ಭದ್ರೆಯೆಂಬ ಗೋವು ಕೃಷ್ಣವರ್ಣಮುಳ್ಳದ್ದು. ಸುರಭಿಯೆಂಬ ಗೋವು

ಶ್ವೇತವರ್ಣಮುಳ್ಳದ್ದು. ಸುಶೀಲೆಯೆಂಬ ಗೋವು ಧೂಮ್ರವರ್ಣಮುಳ್ಳದ್ದು. ಸುಮನೆಯೆಂಬ ಗೋವು ರಕ್ತವರ್ಣಮುಳ್ಳದ್ದು. ಈ ಪ್ರಕಾರದಿಂ ಕ್ರಮವಾಗಿ ನನ್ದಾದಿ ಗೋವುಗಳ ವರ್ಣಗಳು ಹೇಳಲ್ಪಟ್ಟವು. ಎಂಬಲ್ಲಿ ಸಾಕ್ಷಿಯು.—

" ಕಪಿಲಾ ಕೃಷ್ಣಾ ಚ ಸಿತಾ ಧೂಮ್ರಾ ರಕ್ತಾ ತಥೈವ ಚ ||
ನನ್ದಾದೀನಾಂ ಗವಾಂವರ್ಣಾಃ ಕ್ರಮೇಣ ಪರಿಕೀರ್ತಿತಾಃ "

ಯಾವ ಗೋವಿನಿಂದ ಯಾವ ಭಸ್ಮವು ಹುಟ್ಟಿತೆಂದರೆ—ಸದ್ಯೋಜಾತಮುಖದಿಂ ಜನಿಸಿದ ನನ್ದೆಯಿಂ ವಿಭೂತಿಯು, ವಾಮದೇವ ಮುಖದಿಂ ಜನಿಸಿದ ಭದ್ರೆಯಿಂ ಭಸಿತವು, ಅಘೋರಮುಖದಿಂದುತ್ಪನ್ನವಾದ ಸುರಭಿಯಿಂ ಭಸ್ಮವು, ತತ್ಪುರುಷಮುಖದಿಂದಾವಿರ್ಭವಿಸಿದ ಸುಶೀಲೆಯಿಂ ಕ್ಷಾರವು, ಈಶಾನಮುಖದಿಂ ಹುಟ್ಟಿದ ಸುಮನೆಯಿಂ ರಕ್ಷೆಯು ಉಂಟಾಯಿತು. ಎಂಬಲ್ಲಿ ಸಾಕ್ಷಿಯು.—

" ಸದ್ಯೋಜಾತಾದ್ವಿಭೂತಿಶ್ಚ ವಾಮಾದ್ಭಸಿತಮೇವ ಚ ||
ಅಘೋರಾದ್ಭಸ್ಮ ಸಞ್ಜಾತಂ ಪುರುಷಾತ್ ಕ್ಷಾರನಾಮಚ ||
ರಕ್ಷಾಚೇಶಾನವಕ್ತ್ರಾಚ್ಚ ನನ್ದಾದಿದ್ವಾರತೋ ಭವೇತ್ "

ಈ ಭಸ್ಮಗಳಿಗೆ ವಿನಿಯೋಗಮೇನೆನೆ.—ವೀರಶೈವಮತ ಪ್ರವಿಷ್ಟರಾದ ವಿದ್ವಜ್ಜನರಿಂ ಪ್ರಯತ್ನಪೂರ್ವಕಮಾಗಿ, ನಿತ್ಯಕರ್ಮಂಗಳಲ್ಲಿ ವಿಭೂತಿಯು, ನೈಮಿತ್ತಿಕ ಕರ್ಮಗಳಲ್ಲಿ ಭಸಿತವು, ಸಕಲ ಕಾರ್ಯಂಗಳಲ್ಲಿ ಕ್ಷಾರವು, ಸಕಲ ಪ್ರಾಯಶ್ಚಿತ್ತಂಗಳಲ್ಲಿ ಭಸ್ಮವು, ಮೋಕ್ಷಸಾಧಕ ಕಾರ್ಯಂಗಳಲ್ಲಿ ರಕ್ಷೆಯು ವಿಧಿಯನ್ನತಿಕ್ರಮಿಸದೆ ಉಪಯೋಗಿಸಲಿಕ್ಕೆ ಯೋಗ್ಯವು. ಎಂಬಲ್ಲಿ ಸಾಕ್ಷಿಯು.—

" ಧಾರಯೇನ್ನಿತ್ಯಕಾರ್ಯೇಷು ವಿಭೂತಿಞ್ಚ ಪ್ರಯತ್ನತಃ ||
ನೈಮಿತ್ತಿಕೇಷು ಭಸಿತಂ ಕ್ಷಾರಂ ಕಾರ್ಯೇಷು ಸರ್ವದಾ ||
ಪ್ರಾಯಶ್ಚಿತ್ತೇಷು ಸರ್ವೇಷು ಭಸ್ಮನಾಮಯಥಾವಿಧಿ ||
ರಕ್ಷಾಂಚಮೋಕ್ಷಕಾರ್ಯೇಷು ಪ್ರಯೋಕ್ತವ್ಯಂ ಸದಾಬುಧೈಃ "

ಮತ್ತಂ, ಆಗಮಾರ್ಥಮಂ ಬಲ್ಲವರು ಈ ಭಸ್ಮದ ಉತ್ಪತ್ತಿಯನ್ನು ಕಲ್ಪವೆಂದೂ, ಅನುಕಲ್ಪವೆಂದೂ, ಉಪಕಲ್ಪವೆಂದೂ, ಅಕಲ್ಪವೆಂದೂ ನಾಲ್ಕು ಬಗೆಯಾಗಿರುವುದನ್ನಾಗಿ ಹೇಳಿರುವರು. ಇವುಗಳಲ್ಲಿ ಆದಿಯಾದ ಕಲ್ಪಭಸ್ಮವು ದೊರಕದಿರ್ದೊಡೆ, ಮಿಕ್ಕ ಮೂರು ಭಸ್ಮಗಳಲ್ಲಿ ಯಾವುದನ್ನಾದರೂ ಉಪಯೋಗಿಸತಕ್ಕದ್ದು. ಎಂಬಲ್ಲಿ ಸಾಕ್ಷಿಯು.—

" ಭಸ್ಮೋತ್ಪಾದನಮುದ್ದಿಷ್ಟಂ ಚತುರ್ಧಾತನ್ತ್ರವೇದಿಭಿಃ ||

ಕಲ್ಪಂ ಚೈವಾನುಕಲ್ಪಂ ಚ ಉಪಕಲ್ಪಮಕಲ್ಪಕಮ್ ||
ಏಷಾಮಾದಿಮಮುತ್ಕೃಷ್ಟಂ ಅನ್ಯತ್ಸರ್ವಮಭಾವತಃ ''

ಕಲ್ಪಭಸ್ಮದ ಸ್ವರೂಪಮೇನೆನೆ.— ನನ್ದಾದಿ ಗೋವುಗಳಿಂದಾವಿರ್ಭೂತ ಮಾದ ನೂತನ ಗೋಮಯವನ್ನು ಸದ್ಯೋಜಾತ ಮನ್ತ್ರದಿಂದಂತರದಲ್ಲಿಯೇ ಪಿಡಿದು, ವಾಮದೇವ ಮನ್ತ್ರದಿಂ ಮುದ್ದೆಯಂ ಮಾಡಿ, ತತ್ಪುರುಷ ಮನ್ತ್ರದಿಂದೊಣಗಿಸಿ, ಪಂಚಾಕ್ಷರ ಮಹಾ ಮನ್ತ್ರದಿಂ ಸಂಸ್ಕರಿಸಲ್ಪಟ್ಟ ಅಗ್ನಿಯಿಂದ ಅಘೋರಮನ್ತ್ರದಿಂ ಭಸ್ಮೀಕರಿಸಬೇಕು. ಬಳಿಕ ಈಶಾನ ಮನ್ತ್ರದಿಂ ಬಿಲ್ವಪಾತ್ರೆಗಳಲ್ಲಿ ತುಂಬಿ ಇರಿಸಬೇಕು. ಆ ಭಸ್ಮವೇ ಕಲ್ಪವೆಂದು ತಿಳಿಯಲು ಯೋಗ್ಯವು. ಎಂಬಲ್ಲಿ ಸಾಕ್ಷಿಯು.—

" ಯಥಾಶ್ರುತ್ಯುಕ್ತವಿಧಿನಾ ಗೃಹೀತ್ವಾ ಗೋಮಯಂ ನವಮ್ ||
ಸದ್ಯೇನ ವಾಮದೇವೇನ ಕುರ್ಯಾತ್ಪಿಣ್ಡಮನುತ್ತಮಮ್ ||
ಶೋಷಯೇತ್ಪುರುಷೇಣೈವ ದಹೇದ್ಘೋರಾಖ್ಯವಾಗ್ನಿನಾ ||
ತತ ಈಶಾನಮನ್ತ್ರೇಣ ಬಿಲ್ವಪಾತ್ರೇ ನಿಧಾಪಯೇತ್ ||
ಕಲ್ಪಂ ತದ್ಭಸ್ಮ ವಿಜ್ಞೇಯಂ ಅನುಕಲ್ಪಮಥೋಚ್ಯತೇ ''

ಈ ಪ್ರಕಾರಮಾದ ಭಸ್ಮದಿಂ ಸ್ನಾನವಂ ಮಾಡುವಲ್ಲಿ ಲೋಹ ಪಾತ್ರಗಳಲ್ಲಿ ಬೇರೆಬೇರೆಯಾಗಿರಿಸಲ್ಪಟ್ಟ ಭಸ್ಮಗಳಲ್ಲಿ ಯಾವುದನ್ನಾದರೂ ಒಂದು ಭಸ್ಮವಂ ತೆಗೆದುಕೊಂಡು, ತ್ರಿಕಾಲದಲ್ಲಿ ವಿಧ್ಯನುಸಾರವಾಗಿ ಸ್ನಾನವಂ ಮಾಡಬೇಕೆಂಬಲ್ಲಿ ಸಾಕ್ಷಿಯು.—

" ಏಷ್ವೇಕತಮಮಾದಾಯ ಪಾತ್ರೇಷು ಕಲಶಾದಿಷು ||
ತ್ರಿಸನ್ಧ್ಯಮಾಚರೇತ್ಸ್ನಾನಂ ಯಥಾಸಮ್ಭವ ಮೇವ ವಾ ''

ಮತ್ತೊಂದು ಆಗಮೋಕ್ತ ಪ್ರಕಾರಮಾದ ಭಸ್ಮೋತ್ಪತ್ತಿಯಂ ನಿರೂಪಿಸುವ ದೆಂತೆನೆ.—ಭಕ್ತಿಯುಕ್ತನಾದ ಪುರುಷಶ್ರೇಷ್ಠನು ಜಿತೇನ್ದ್ರಿಯನಾಗಿ, ಕಾರ್ತಿಕ, ಮಾರ್ಗಶೀರ್ಷ, ಮಾಘ, ಆಶ್ವಯುಜ, ವೈಶಾಖ, ಶ್ರಾವಣ ಈ ಮಾಸಗಳಲ್ಲಿ ಯಾವ ಮಾಸದಲ್ಲಾದರೂ ಭಸ್ಮಸಙ್ಗ್ರಹವಂ ಮಾಡಬೇಕು. ಎಂಬಲ್ಲಿ ಸಾಕ್ಷಿಯು.-

" ಕಾರ್ತಿಕೇ ಮಾರ್ಗಶೀರ್ಷೇತು ಮಾಘೇ ವಾಽಽಶ್ವಯುಜೇಪಿ ವಾ ||
ವೈಶಾಖೇ ಶ್ರಾವಣೇ ವಾಪಿ ಭಸ್ಮಸಙ್ಗ್ರಹಣಂ ವಿದುಃ ''

ಅತ್ಯಂತ ಶುದ್ಧಮಾದ ಭಸ್ಮದಿಂ ಮಾಡುವ ಸ್ನಾನವೇ—ಆಗ್ನೇಯ ಸ್ನಾನವೆಂದೆನಿಸುವುದು, ಆ ಸ್ನಾನವು ಭುಕ್ತಿಮುಕ್ತಿಗಳನ್ನು ಕೊಡತಕ್ಕುದು, ಅದು ಕಲ್ಪಾದಿಭೇಧಗಳಿಂ ನಾಲ್ಕು ಪ್ರಕಾರವೆಂದು ಹೇಳಲ್ಪಡುತ್ತಿಹುದು. ಎಂಬಲ್ಲಿ ಸಾಕ್ಷಿಯು.-

" ಭುಕ್ತಿ ಮುಕ್ತಿದ ಮಾಗ್ನೇಯಂ ಸ್ನಾನಂ ಶುದ್ಧೇನಭಸ್ಮನಾ ||
ಸ್ನಾನಂ ಚತುರ್ವಿಧಂ ತತ್ರ ಭವೇತ್ಕಲ್ಪಾದಿ ಭೇದತಃ "

ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪ ಎಂಬ ನಾಲ್ಕು ಬಗೆಯಾಗಿರುವ ಭಸ್ಮಗಳಲ್ಲಿ ಮೊದಲಿನ ಕಲ್ಪವು ಉತ್ತಮವು. ಪೂರ್ವ ಕಲ್ಪವು ಸಂಭವಿಸದೆ ಇದ್ದಲ್ಲಿ ಉತ್ತರೋತ್ತರವು ಶ್ರೇಷ್ಠವು. ಎಂಬಲ್ಲಿ ಸಾಕ್ಷಿಯು.—

" ಕಲ್ಪಂ ಚೈವಾನುಕಲ್ಪಂಚ ಉಪಕಲ್ಪಮಕಲ್ಪಕಮ್ ||
ಶೇಷ್ವಾದ್ಯತಮ ಮುತ್ಕೃಷ್ಟಂ ಪೂರ್ವಾಭಾವೇ ಭವೇತ್ಪರಮ್ "

ಬೇರೊಂದುಬಗೆಯಾದ ಭಸ್ಮೋತ್ಪತ್ತಿಯಂ ನಿರೂಪಿಸುವೆನದೆಂತೆನೆ.—ಕಪಿಲ ವರ್ಣದ ಗೋವನ್ನು ಅಥವಾ ಅಗ್ನಿವರ್ಣದ ಗೋವನ್ನು ಅಥವಾ ಸ್ವರ್ಣವರ್ಣದ ಗೋವನ್ನು ಪೂರ್ವದಿವಸದಲ್ಲಿ ಶುದ್ಧವಾದ ಪ್ರದೇಶದಲ್ಲಿ ಕಟ್ಟಿ, ಆ ಗೋವಿಗೆ ನಮಸ್ಕಾರವಂ ಮಾಡಿ, ಸ್ತೋತ್ರಂಗೈದು, ಕೋಮಲವಾದ ತೃಣಾಂಕುರಗಳ ಗ್ರಾಸಮುಷ್ಟಿಗಳನ್ನು ಸಮರ್ಪಿಸಿ, ಆ ಗೋವನ್ನು ಎಲೈ ಅಗ್ನಿಕುಂಡದಿಂದುದ್ಭವಿಸಿ ಸರ್ವದೇವಸ್ವರೂಪಳಾಗಿರುವ ಧೇನುವೇ! ಈ ಅಪಾರವಾಗಿರುವ ಸಂಸಾರ ಸಾಗರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸಿ ಪರಿಪಾಲಿಸುವವಳಾಗು, ಎಲೈ ತಾಯೇ! ಮನಸ್ಸಿನಿಂದಲೂ, ಕರ್ಮದಿಂದಲೂ, ವಾಕ್ಕಿನಿಂದಲೂ ನಾನು ಮಾಡಿದ ಪಾಪಗಳೆಲ್ಲವನ್ನೂ ಜಾಗ್ರತೆಯಿಂ ಪರಿಹರಿಸಿ, ನನ್ನಂ ಪಾಲಿಸುವವಳಾಗೆಂದು ಪ್ರಾರ್ಥಿಸಿ, ಪ್ರದಕ್ಷಿಣ ನಮಸ್ಕಾರಗಳಂ ಮಾಡಿ, ನನಗೆ ಗೋವುಗಳೇ ತಾಯಿಗಳು, ವೃಷಭಗಳೇ ತಂದೆಗಳು, ಆದ್ದರಿಂದ ಎಲೈ ತಾಯೇ! ನನ್ನಿಂದ ಸಮರ್ಪಿಸಲ್ಪಟ್ಟ ಈ ತೃಣಗ್ರಾಸಮುಷ್ಟಿಗಳಂ ಪರಿಗ್ರಹಿಸಿ ನನ್ನಂ ಪಾಲಿಸುವವಳಾಗು, ಎಂದು ಇತ್ಯಾದಿ ಮನ್ತ್ರಗಳಿಂದ ಉಪಚಾರಂಗಳಂ ಪೇಳಿ, ಬಾರಿಬಾರಿಗೂ ತೃಣಗ್ರಾಸಗಳಂ ಕೊಟ್ಟು, ಧೂಪ ದೀಪ ಮೊದಲಾದುಪಚಾರಂಗಳಿಂದ ರಾತ್ರಿಕಾಲದಲ್ಲಿ ಪೂಜಿಸಬೇಕು. ಎಂಬಲ್ಲಿ ಸಾಕ್ಷಿಯು.

" ಕಪಿಲಾಮಗ್ನಿವರ್ಣಾಂ ವಾ ಸ್ವರ್ಣವರ್ಣಾಮಥಾಪಿ ವಾ ||
ಪೂರ್ವಸ್ಮಿನ್ದಿವಸೇ ಬದ್ಧ್ವಾ ಕೋಮಲಾಂಶ್ಚ ತೃಣಾಙ್ಕುರಾನ್ ||
ದತ್ವಾ ಸ್ತುತ್ವಾ ಪ್ರಣಮ್ಯಾಥ ಗ್ರಾಸಮುಷ್ಟೀಸ್ಸಮರ್ಪಯೇತ್ ||
ಅಗ್ನಿಕುಣ್ಡಸಮುದ್ಭೂತೇ ಸರ್ವದೇವಮಯೇ ಶುಭೇ ||
ಸಂಸಾರಾರ್ಣವಮಗ್ನಂ ಮಾಂ ಗೌರ್ಮಾತಸ್ತ್ರಾತುಮರ್ಹಸಿ ||
ಯದೇನಃಕರ್ಮಣಾ ವಾಚಾ ಮನಸಾಽಪಿ ಕೃತಂ ಮಯಾ ||
ಪರಿಹೃತ್ಯಾಶು ತತ್ಸರ್ವಂ ಕೃಪಯಾ ಪಾಹಿ ಮಾಮಿತಿ ||

ಪ್ರಾರ್ಥ್ಯ ಪ್ರದಕ್ಷಿಣಂ ಕೃತ್ವಾ ಭಕ್ತ್ಯಾ ತಾಂ ಪ್ರಣಮೇದ್ಬುಧಃ ||
ಗಾವೋ ಮೇ ಮಾತರಸ್ಸರ್ವಾಃ ಪಿತರಶ್ಚಾಪಿ ಗೋವೃಷಾಃ ||
ಗ್ರಾಸಮುಷ್ಟಿಂ ಮಯಾದತ್ತಾಂ ಪರಿಗೃಹ್ಯಾಮ್ಬ ! ಮಾಮವ ||
ಇತ್ಯಾದಿಭಿರ್ಮನ್ತ್ರವರ್ಯೈಃ ಗ್ರಾಸಂ ದತ್ವಾ ಪುನಃ ಪುನಃ ||
ಧೂಪದೀಪೈಸ್ಸಮಭ್ಯರ್ಚ್ಯ ರಾತ್ರೌ ಸಮ್ಪೂಜ್ಯ ಭಕ್ತಿತಃ "

ಈ ಗ್ರಾಸದಾನದಿಂ ಫಲವುಂಟೋ ? ಎಂದರೆ, ಗೋವುಗಳಿಗೆ ಒಂದು ತೃಣ ಮುಷ್ಟಿಯನ್ನಾದರೂ ಸಮರ್ಪಿಸಿದವನಿಗೆ—ಸಹಸ್ರಾಶ್ವಮೇಧಯಾಗಗಳಂ ಮಾಡಿದ ಫಲವೂ, ಶತವಾಜಪೇಯಗಳಂ ಮಾಡಿದ ಫಲವೂ ಉಂಟಾಗುವುದೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದು. ಎಂಬಲ್ಲಿ ಸಾಕ್ಷಿಯು.—

"ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ||
ತೃಣಮುಷ್ಟಿಪ್ರದಾನೇನ ಫಲಮೇತದುದೀರಿತಮ್ "

ಈ ಫಲವು ಅನ್ಯರ ಗೋವುಗಳಂ ಪೂಜಿಸಿದವರಿಗೆ ಸಂಪೂರ್ಣವಾಗಿ ಲಭಿಸುವುದು. ತಮ್ಮ ಮನೆಯುಲ್ಲಿರುವ ಗೋವುಗಳಂ ಪೂಜಿಸಿದವರಿಗೆ ತದರ್ಧಫಲವು ಲಭಿಸುವುದು. ಎಂಬಲ್ಲಿ ಸಾಕ್ಷಿಯು.—

"ಏತತ್ಫಲಂ ಪರಗವಾಂ ತದರ್ಧಂ ಸ್ವಗವಾಂ ಸ್ಮೃತಮ್ "

ಈ ಪ್ರಕಾರವಾಗಿ ಪೂರ್ವದಿನದ ರಾತ್ರಿಯಲ್ಲಿ ನಿಯಮದಿಂ ಗೋವನ್ನು ಪೂಜಿಸಿ, ಗೋಮಯವನ್ನು ಸಂಗ್ರಹಿಸುವುದಕ್ಕೋಸ್ಕರ ಜಾಗರಣವಂ ಮಾಡುತ್ತಾ ಇದ್ದು, ಗೋಮಯವನ್ನು ನೆಲದಮೇಲೆ ಬೀಳುವುದಕ್ಕೆ ಮೊದಲೇನೆ ಸಂಗ್ರಹಿಸಬೇಕು. ಎಂಬಲ್ಲಿ ಸಾಕ್ಷಿಯು.—

"ಕೃತ್ವಾ ಜಾಗರಣಂ ರಾತ್ರೌ ಗೋಮಯಗ್ರಹಣಾಯ ಚ ||
ಭೂಮಿಸಂಸ್ಪರ್ಶನಾತ್ಪೂರ್ವಂ ಗೋಮಯಂ ಧಾರಯೇದ್ಬುಧಃ "

ಆ ಬಳಿಕ, ಭಾನುವಾರದಲ್ಲಾದರೂ, ಸೋಮವಾರದಲ್ಲಾದರೂ, ಶನಿವಾರದಲ್ಲಾದರೂ, ಶ್ರವಣ, ಆರ್ದ್ರಾ, ರೋಹಿಣೀ ನಕ್ಷತ್ರಗಳಿಂ ಕೂಡಿದ ದಿವಸದಲ್ಲಾದರೂ, ಆ ಗೋಮಯವನ್ನು ಚೆನ್ನಾಗಿ ಶೋಧಿಸಿ, ಅದನ್ನು ಉಂಡೆಗಳಂ ಮಾಡಿ, ಸೂರ್ಯಕಿರಣಗಳಲ್ಲಿಯೇ ಒಣಗಿಸಿ, ಆ ಉಂಡೆಗಳಂ ಗೋಮಯೋದಕದಿಂ ಶುದ್ಧವಾದ ಸ್ಥಳದಲ್ಲಿರಿಸಿ, ಅದರಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ, ಭಕ್ತಿಯಿಂದ ಆ ಯಜ್ಞೇಶ್ವರನಲ್ಲಿ ಪರಮೇಶ್ವರನನ್ನು ಆವಾಹಿಸಿ, ಷೋಡಶೋಪಚಾರಗಳಿಂ ಪೂಜಿಸಿ, ರುದ್ರಸೂಕ್ತದಿಂದ ಹೋಮವಂ ಮಾಡಬೇಕು. ಎಂಬಲ್ಲಿ ಸಾಕ್ಷಿಯು.—

" ರವಿವಾರೇಸ್ನುವಾರೇ ವಾ ಶ್ರವಣಾರ್ದ್ರಾದಿನೇಽಪಿ ವಾ ||
ಮನ್ದವಾರೇ ತು ರೋಹಿಣ್ಯಾಂ ಕುರ್ಯಾತ್ತದ್ಭಸ್ಮಸಙ್ಗ್ರಹಮ್ ||
ಗೃಹೀತ್ವಾ ಗೋಮಯೇ ಶೋಧ್ಯೇ ಶುಷ್ಕಂ ಕೃತ್ವಾರ್ಕರಶ್ಮಿಭಿಃ ||
ಅಗ್ನಿಂ ತತ್ರ ಪ್ರತಿಷ್ಠಾಪ್ಯ ಹ್ಯಾಲಿಪ್ತೇ ಗೋಮಯಾಮ್ಭಸಾ ||
ತತ್ರಾವಾಹ್ಯ ಶಿವಂ ಭಕ್ತ್ಯಾ ತತಸ್ಸಮ್ಪೂಜ್ಯ ಮಾನವಃ ||
ರುದ್ರಸೂಕ್ತೇನ ಹೋಮಞ್ಚ ಕುರ್ಯಾದ್ಭಕ್ತಿವಿನಮ್ರಧೀಃ "

ಬಳಿಕ, ಆ ಹೋಮದಿಂ ದಗ್ಧವಾದ ಗೋಮಯ ಪಿಣ್ಡಂಗಳಂ ತೆಗೆದುಕೊಂಡು, ಚೆನ್ನಾಗಿ ಆರಿಸಿ, ಪುನಃ ನೀರಿನಲ್ಲಿ ಕಲಸಿ, ಪಂಚಗವ್ಯಗಳಿಂದ ಸಂಸ್ಕರಿಸಿ, ಶ್ರೀಸೂಕ್ತದಿಂದ ಉಂಡೆಗಳಂ ಕಟ್ಟಿ, ರುದ್ರಸೂಕ್ತವಂ ಜಪಿಸಿ, ಸೂರ್ಯಸೂಕ್ತದಿಂದೊಣಗಿಸಿ, ದುರ್ಗಾಸೂಕ್ತದಿಂದ ಪೂಜಿಸಿ, ಅದರಲ್ಲಿ ಶಕ್ತಿಪಞ್ಚಾಕ್ಷರೀವಿದ್ಯೆಯನ್ನಾವಾಹಿಸಿ, ಶಿವಾಗಮೋಕ್ತ ವಿಧಾನದಿಂದ ಆ ಭಸ್ಮಕ್ಕೆ ಪ್ರಾಣಪ್ರತಿಷ್ಠೆಯಂ ಮಾಡಬೇಕು. ಎಂಬಲ್ಲಿ ಸಾಕ್ಷಿಯು.—

" ತತ್ರ ಗೋಮಯಪಿಣ್ಡಂ ಯದ್ದಗ್ಧ್ವಾ ಸಂಶೋಷ್ಯ ಪಾಥಸಾ ||
ಆಲೋಡ್ಯ ಪಞ್ಚಗವ್ಯೇನ ಪಞ್ಚವಕ್ತ್ರೋದ್ಭವೇನ ಚ ||
ಶ್ರೀಸೂಕ್ತೇನ ಸಮಾಮನ್ತ್ರ್ಯ ರುದ್ರಸೂಕ್ತಂ ಪ್ರಜಪ್ಯ ಚ ||
ಶೋಷಯೇತ್ಸೂರ್ಯಸೂಕ್ತೇನ ದುರ್ಗಾಸೂಕ್ತೇನ ಪೂಜಯೇತ್ ||
ಶಕ್ತಿಪಞ್ಚಾಕ್ಷರೀ ವಿದ್ಯಾ ಮಾವಾಹ್ಯಾಭ್ಯರ್ಚ್ಯ ವಾಗ್ಯತಃ ||
ಪ್ರಾಣಪ್ರತಿಷ್ಠಾಞ್ಕುರ್ವೀತ ಶೈವಾಗಮವಿಧಾನತಃ "

ಈ ಪ್ರಕಾರವಾಗಿ ಚೆನ್ನಾಗಿ ಯಥಾವಿಧಿಯಾಗಿ, ಭಸ್ಮಸಙ್ಗ್ರಹವಂ ಮಾಡಿ, ಅದನ್ನು ಧರಿಸಿದೊಡೆ ಪಾಪಗಳೆಲ್ಲವೂ ನಾಶವಾಗುವುವು. ಈಪ್ರಕಾರವಾಗಿ ಮಾಡಿದ ಭಸ್ಮಸಙ್ಗ್ರಹವು ಕಲ್ಪವೆಂದೆನಿಸಿಕೊಳ್ಳುವುದು. ಎಂಬಲ್ಲಿ ಸಾಕ್ಷಿಯು.—

" ಏವಂ ಸಮ್ಯಗ್ವಿಧಾನೇನ ಭಸ್ಮ ಸಙ್ಗ್ರಾಹ್ಯಮುತ್ತಮಮ್ ||
ತದ್ಭಸ್ಮ ಧಾರಯೇದ್ಭಕ್ತ್ಯಾ ಮಹಾಪಾತಕಶಾನ್ತಯೇ ||
ಕಲ್ಪಂ ತದ್ಭಸ್ಮ ವಿಜ್ಞೇಯಮ್ "

ಕಾಡುಗಳಲ್ಲಿ ಬಿದ್ದೊಣಗಿದ ಗೋಮಯವನ್ನು ಚೂರ್ಣವಂ ಮಾಡಿ, ಅದು ಪೂರ್ವೋಕ್ತ ವಿಧಾನದಿಂ ದಹಿಸಲ್ಪಟ್ಟರೆ, ಅನುಕಲ್ಪವೆಂದೆನಿಸಿಕೊಳ್ಳುವುದೆಂಬಲ್ಲಿ ಸಾಕ್ಷಿಯು.—

" ಅನುಕಲ್ಪ ಮಥೋಚ್ಯತೇ ||
ವನೇಷು ಗೋಮಯಂ ಯಚ್ಚ ಶುಷ್ಕಂ ಚೂರ್ಣೀಕೃತಂ ತಥಾ ||
ದಗ್ಧಂ ಚೈವಾನುಕಲ್ಪಾಖ್ಯಮ್ "

ಅಂಗಡಿ ಮೊದಲಾದ ಸ್ಥಲಗಳಲ್ಲಿ ದೊರಕಿದ ಭಸ್ಮವನ್ನು ವಸ್ತ್ರದಿಂ ಗಾಳಿ ಗೋಮೂತ್ರದಿಂ ಕಲಸಿ ಮುದ್ದೆಯಂ ಮಾಡಿ, ಪ್ರಾಗುಕ್ತ ವಿಧಾನದಿಂ ದಹಿಸಲ್ಪ ಆ ಭಸ್ಮವು ಉಪಕಲ್ಪವಹುದು. ಎಂಬಲ್ಲಿ ಸಾಕ್ಷಿಯು.—

" ಆಪಣಾದಿಗತನ್ತು ಯತ್ ||
ವಸ್ತ್ರೇಣ ಚೋತ್ತಾರಿತಂ ತದ್ಭಸ್ಮ ಗೋಮೂತ್ರಪಿಣ್ಡಿತಮ್ ||
ದಗ್ಧಂ ಪ್ರಾಗುಕ್ತವಿಧಿನಾ ಭವೇದ್ಭಸ್ಮೋಪಕಲ್ಪಕಮ್ "

ಮನ್ತ್ರಜ್ಞರಲ್ಲದವರಿಂ ಸಂಪಾದಿಸಲ್ಪಟ್ಟ ಭಸ್ಮವು ಅಕಲ್ಪವೆಂದೆನಿಸಿಕೊಳ್ಳುವ ದೆಂಬಲ್ಲಿ ಸಾಕ್ಷಿಯು.—

" ಅನ್ಯೈರಾಪಾದಿತಂ ಭಸ್ಮ ಹ್ಯಕಲ್ಪಮಿತಿ ಕಥ್ಯತೇ "

ಭಸ್ಮಸ್ನಾನವು ಎಂತು ಮಾಡಲ್ತಕ್ಕುದೆಂದರೆ.—ಸ್ನಾನಕಾಲದಲ್ಲಿ ಶುದ್ಧೋದಕದಿಂ ಹಸ್ತಪಾದಂಗಳಂ ತೊಳೆದು, ಸುಸ್ಥಾನದಲ್ಲಿ ಕುಳ್ಳಿರ್ದು, ವಾಮಹಸ್ತದಲ್ಲಿ ಭಸ್ಮವನಿಟ್ಟು ದಕ್ಷಿಣಹಸ್ತದಿಂ ಮುಚ್ಚಿ, ಬಲದೊಡೆಯ ಮೇಲಿಟ್ಟುಕೊಂಡು, ಮೌನಿಯಾಗಿ, ಮೂಲಮನ್ತ್ರದಿಂದೆಂಟುಸಾರಿ ಅಭಿಮನ್ತ್ರಿಸಿ, ಈಶಾನಮನ್ತ್ರದಿಂ ಶಿರಸ್ಸನ್ನು, ತತ್ಪುರುಷಮನ್ತ್ರದಿಂ ಮುಖವನ್ನು, ಅಘೋರಮನ್ತ್ರದಿಂ ಹೃತ್ಪ್ರದೇಶವನ್ನು, ವಾಮದೇವಮನ್ತ್ರದಿಂ ಗುಹ್ಯವನ್ನು, ಸದ್ಯೋಜಾತಮನ್ತ್ರದಿಂ ಪಾದದ್ವಯವನ್ನು ಪ್ರಣವದಿಂದ ಸರ್ವಾಂಗವನ್ನು ಪ್ರೋಕ್ಷಿಸಿಕೊಳ್ಳಬೇಕು. ಎಂಬಲ್ಲಿ ಸಾಕ್ಷಿಯು.—

" ಸ್ನಾನಕಾಲೇ ಕರೌ ಪಾದೌ ಪ್ರಕ್ಷಾಳ್ಯ ವಿಮಲಾಮ್ಭಸಾ ||
ವಾಮಹಸ್ತತಳೇ ಭಸ್ಮ ಕ್ಷಿಪ್ತ್ವಾಽಚ್ಛಾದ್ಯಾನ್ಯಪಾಣಿನಾ ||
ಅಷ್ಟಕೃತ್ವಾ ತು ಮೂಲೇನ ಮೌನೀ ಭಸ್ಮಾಭಿಮನ್ತ್ರ್ಯ ಚ ||
ಶಿರ ಈಶಾನಮನ್ತ್ರೇಣ ಪುರುಷೇಣ ಮುಖಂ ತಥಾ ||
ಹೃತ್ಪ್ರದೇಶಮಘೋರೇಣ ವಾಮದೇವೇನ ಗುಹ್ಯಕಮ್ ||
ಪಾದೌ ಸದ್ಯೇನ ಸರ್ವಾಙ್ಗಂ ಪ್ರಣವೇನೈವ ಸೇಚಯೇತ್ "

ಭಸ್ಮದಿಂ ಮಾಡಲ್ಪಡುವ ಸ್ನಾನವು—ಆಗ್ನೇಯವಾದುದರಿಂದ ಜಲಸ್ನಾನ ವಾಯವ್ಯಾದಿ ಸ್ನಾನಗಳಿಗಿಂತಲೂ ಶ್ರೇಷ್ಠವಾದದ್ದು. ಇದು ಸಕಲ ಪಾಪಂಗಳನ್ನು ಪರಿಹರಿಸತಕ್ಕದ್ದು. ಎಂಬಲ್ಲಿ ಸಾಕ್ಷಿಯು.—

" ಭಸ್ಮನಾ ವಿಹಿತಂ ಸ್ನಾನಮಿದಮಾಗ್ನೇಯ ಮುತ್ತಮಮ್ ||
ಸ್ನಾನೇಷು ವಾರುಣಾದ್ಯೇಷು ಮುಖ್ಯಮೇತನ್ಮಲಾಪಹಮ್ "

ಈ ಭಸ್ಮಸ್ನಾನವು—ಯಾರಿಂದಙ್ಗೀಕರಿಸಲ್ಪಟ್ಟಿತೆಂದರೆ.—ಬ್ರಹ್ಮಾದಿ ದೇವತೆಗಳೂ, ನಾರದಾದಿ ಮುನಿಗಳೂ, ಸನಕಾದಿ ಯೋಗಿಗಳೂ, ಬಾಣಾದಿ ದಾನವರೂ, ಭಸ್ಮಸ್ನಾನಯುಕ್ತರಾಗಿ; ಶಿವಭಕ್ತಿಪರಾಯಣರೂ, ನಿರ್ದ್ದೋಷಿಗಳೂ, ನಿತ್ಯಶುದ್ಧರೂ ಆಗಿರುತ್ತಾರೆ. ಎಂಬಲ್ಲಿ ಸಾಕ್ಷಿಯು.—

" ಬ್ರಹ್ಮಾದ್ಯಾ ವಿಬುಧಾಸ್ಸರ್ವೇ ಮುನಯೋ ನಾರದಾದಯಃ ||
ಯೋಗಿನಸ್ಸನಕಾದ್ಯಾಶ್ಚ ಬಾಣಾದ್ಯಾ ದಾನವಾ ಅಪಿ ||
ಭಸ್ಮಸ್ನಾನಯುತಾಸ್ಸರ್ವೇ ಶಿವಭಕ್ತಿಪರಾಯಣಾಃ ||
ನಿರ್ಮುಕ್ತದೋಷನಿವಹಾ ನಿತ್ಯಶುದ್ಧಾ ಭವನ್ತಿ ಹಿ "

ಭಸ್ಮದಿಂ ತ್ರಿಪುಣ್ಡ್ರಧಾರಣೆಯಂ ಮಾಡಿಕೊಳ್ಳದೆ ಶಿವಪೂಜೆಯಂ ಮಾಡಬಹುದೋ ? ಎಂದರೆ, ಭಸ್ಮದಿಂ ತ್ರಿಪುಣ್ಡ್ರಗಳಂ ಧರಿಸದೆ ಶಿವನನ್ನು ಪೂಜಿಸಿದೊಡೆ ಆ ಶಿವನು ಆ ಪೂಜಕನಿಗೆ ಆ ಪೂಜಾಫಲವನ್ನೀಯುವುದಿಲ್ಲವೆಂಬಲ್ಲಿ ಸಾಕ್ಷಿಯು.—

" ವಿನಾ ಭಸ್ಮತ್ರಿಪುಣ್ಡ್ರೇಣ ವಿನಾ ರುದ್ರಾಕ್ಷಧಾರಣಮ್ ||
ಪೂಜಿತೋಪಿ ಮಹಾದೇವೋ ನ ತಸ್ಯ ಫಲದೋ ಭವೇತ್ "

ಮತ್ತಂ, ಯಾವನು— ಭಸ್ಮವನ್ನು ಧರಿಸದೆ ಶಿವನನ್ನು ಪೂಜಿಸುತ್ತಾನೆಯೋ, ಆತನು—ಭಾಗ್ಯವಿಹೀನನು. ಮತ್ತಮುವನೇ ಶಿವದ್ವೇಷಿಯು. ಅವನ ಕರ್ಮವೆಲ್ಲವೂ ವ್ಯರ್ಥವಾಗುವುದು. ಎಂಬಲ್ಲಿ ಸಾಕ್ಷಿಯು.—

" ವಿಭೂತಿಧಾರಣಂ ತ್ಯಕ್ತ್ವಾ ಯಃ ಕರೋತಿ ಶಿವಾರ್ಚನಮ್ ||
ಸ ದುರ್ಭಗಶ್ಶಿವದ್ವೇಷೀ ತಸ್ಯ ಸರ್ವಂ ನಿರರ್ಥಕಮ್ "

ಮತ್ತಂ, ಯಾವನು— ಭಸ್ಮರುದ್ರಾಕ್ಷಗಳನ್ನು ಧರಿಸಿಕೊಳ್ಳದೆ ಶಿವಪೂಜೆಯಂ ಮಾಡುವನೋ, ಅವನು—ಹದಿನಾಲ್ಕು ಇನ್ದ್ರಪಟ್ಟಗಳು ಪೂರ್ತಿಯಾಗುವವರೆಗೂ, ಭಯಂಕರವಾದ ನರಕವನ್ನು ಅನುಭವಿಸುವನು. ಎಂಬಲ್ಲಿ ಸಾಕ್ಷಿಯು.—

" ವಿನಾ ರುದ್ರಾಕ್ಷಭಸ್ಮಭ್ಯಾಂ ಪೂಜಯೇದ್ಯಸ್ಸದಾಶಿವಮ್ ||
ಸ ಯಾತಿ ನರಕಂ ಘೋರಂ ಯಾವದಿನ್ದ್ರಾಶ್ಚತುರ್ದಶ "

ಸಮಸ್ತ ಕರ್ಮಗಳನ್ನಾಚರಿಸುವಾಗಲೂ ಹೀಗೆಯೇ ನಿಯಮವೋ ? ಎಂದರೆ-ಯಾರು— ಭಸ್ಮರುದ್ರಾಕ್ಷಧಾರಣವಿಲ್ಲದವರಾಗಿ ಕರ್ಮಗಳಂ ಮಾಡುತ್ತಾರೆಯೋ, ಅವರು—ಕೋಟಿ ಜನ್ಮಗಳಿಂದಲೂ ಸಂಸಾರದಿಂದ ಬಿಡುಗಡೆಯನ್ನು ಹೊಂದುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಯೇ ಭಸ್ಮಧಾರಣಂ ತ್ಯಕ್ತ್ವಾ ಕರ್ಮ ಕುರ್ವನ್ತಿ ಮಾನವಾಃ ||
ತೇಷಾಂ ನಾಸ್ತಿ ವಿನಿರ್ಮೋಕ್ಷಸ್ಸಂಸಾರಾಜ್ಜನ್ಮಕೋಟಿಭಿಃ "

ಸಕಲ ಕರ್ಮಗಳನ್ನೂ ಭಸ್ಮರುದ್ರಾಕ್ಷ ಧಾರಣ ಸಂಪನ್ನರಾಗಿಯೇ ಮಾಡಬೇಕೆಂದು ತಾತ್ಪರ್ಯವು.

ಮತ್ತಂ, ಪೂರ್ವ ಜನ್ಮಗಳಲ್ಲಿ ಮಹಾ ಪಾಪಗಳಂ ಮಾಡಿದವರಿಗೆ—ಭಸ್ಮಸ್ನಾನಾದಿಗಳಲ್ಲಿ ದ್ವೇಷವುಂಟಾಗುವುದೆಂದು ದೃಢವಾಗಿ ತಿಳಿಯತಕ್ಕದ್ದು. ಎಂಬಲ್ಲಿ ಸಾಕ್ಷಿಯು.—

" ಮಹಾಪಾತಕಯುಕ್ತಾನಾಂ ಪೂರ್ವಜನ್ಮಸು ಸರ್ವಥಾ ||
ಭಸ್ಮಸ್ನಾನಾದಿಷು ದ್ವೇಷೋ ಜಾಯತೇ ಸುದೃಢಂಬುಧಃ "

ದೀರ್ಘಾಯುಸ್ಸನ್ನಪೇಕ್ಷಿಸತಕ್ಕ ಪುರುಷನೂ, ಸಮ್ಪತ್ತನ್ನಪೇಕ್ಷಿಸತಕ್ಕ ಪುರುಷನೂ, ಮೋಕ್ಷವನ್ನಪೇಕ್ಷಿಸತಕ್ಕ ದ್ವಿಜನೂ ನಿತ್ಯದಲ್ಲೂ ಭಸ್ಮವಂ ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಆಯುಷ್ಕಾಮೋಽಥವಾ ರಾಜನ್! ಭೂತಿಕಾಮೋಽಥವಾ ನರಃ ||
ನಿತ್ಯಂ ವೈ ಧಾರಯೇದ್ಭಸ್ಮ ಮೋಕ್ಷಕಾಮೀ ಚ ಸರ್ವದಾ "

[ಈ ವಿಷಯವು—ನಮ್ಮಿಂದ ರಚಿತಮಾದ ' ಸರ್ವಾಗಮಸಾರ ' ವೆಂಬ ಗ್ರನ್ಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದರಿಂದ ಇಲ್ಲಿ ಸಂಕ್ಷೇಪಿಸಲ್ಪಟ್ಟಿದೆ.]

" ಅಗ್ನಿರಿತಿ ಭಸ್ಮ " ಇತ್ಯಾದಿ ಮನ್ತ್ರಗಳಿಂದ ಅಭಿಮನ್ತ್ರಿತಮಾದ ಶುದ್ಧವಾದ ಭಸ್ಮವನ್ನು ಋಷಿ, ಛಂದಸ್ಸು, ಅಧಿದೇವತೆ, ಬೀಜ, ಶಕ್ತಿ, ಕೀಲಕಗಳಿಂದು ಪೇತವಾದ ಶಿವಪಂಚಾಕ್ಷರ ಮನ್ತ್ರದಿಂದಾದರೂ, ಶಿವಾಷ್ಟಾಕ್ಷರ ಮನ್ತ್ರದಿಂದಾದರೂ, ಗಾಯತ್ರೀ ಮನ್ತ್ರದಿಂದಾದರೂ, ಪ್ರಣವ ಮನ್ತ್ರದಿಂದಾದರೂ ಧರಿಸಬೇಕೆಂಬಲ್ಲಿ ಸಾಕ್ಷಿಯು.—

" ಅಗ್ನಿರಿತ್ಯಾದಿಭಿರ್ಮನ್ತ್ರೈಶ್ಶುದ್ಧಂ ಭಸ್ಮಾಽಭಿಮನ್ತ್ರಿತಮ್ ||
ಶಿವಮನ್ತ್ರೇಣ ವಾ ಧಾರ್ಯಂ ಮನ್ತ್ರೇಣಾಷ್ಟಾಕ್ಷರೇಣ ವಾ ||
ಗಾಯತ್ರ್ಯಾ ವಾಽಪಿ ದೇವರ್ಷಿಯುಕ್ತೇನ ಪ್ರಣವೇನ ವಾ "

ಭಸ್ಮೋದ್ಧೂಳನತ್ರಿಪುಣ್ಡ್ರಧಾರಣೆಗಳೆರಡೂ ಸಮುಚ್ಚಯ ನ್ಯಾಯದಿಂದವಶ್ಯವಾಗಿ ಮಾಡಲ್ಪತಕ್ಕುವುಗಳೋ ? ಪರ್ಯಾಯದಿಂ ಯಥಾಶಕ್ತಿಯಾಗಿ ಯಾವುದಾದರೊಂದು ಮಾಡಲ್ಪತಕ್ಕದೋ ? ಅಥವಾ ಪ್ರಧಾನೋಪಸರ್ಜನನ್ಯಾಯದಿಂದೊಂದಕ್ಕೆ ಪ್ರಾಧಾನ್ಯವೋ ? ಎಂದರೆ,—"ಉದ್ಧೂಳನಂ ತ್ರಿಪುಣ್ಡ್ರಂ ಚ ಮನಸಾಪಿ ನ ಲಙ್ಘ

ಯೇತ್ '' ಎಂಬ ಕೇದಾರ ಖಂಡಸ್ಥ ವಚನವು ಉದ್ಧೂಳನವನ್ನೂ ತ್ರಿಪುಂಡ್ರ ವನ್ನೂ ಮನಸ್ಸಿನಿಂದಲೂ ವಿಾರಲಾಗದೆಂದು ಸಮುಚ್ಚಯದಿಂ ವಿಧಿಸಿರುವುದರಿಂದ ಸಮಪ್ರಾಧಾನ್ಯದಿಂದ ಸಮುಚ್ಚಯವಾಗಿ ಎರಡೂ ಅವಶ್ಯಕರ್ತವ್ಯವಾಗಿರುತ್ತವೆ. ಅಶಕ್ತನಿಗೆ ತ್ರಿಪುಂಡ್ರಮಾತ್ರವೇ ಅವಶ್ಯಕವೆಂದೂ, ಶಕ್ತನಿಗೆ ಉದ್ಧೂಳನತ್ರಿಪುಂಡ್ರ ಗಳೆರಡೂ ಅವಶ್ಯಕವೆಂದೂ ‹‹ ಉದ್ಧೂಳನೇಷ್ವಶಕ್ತಶ್ಚೇತ್ '' ಎಂದು ಹೇಳಿರುವ ಬೃಹಜ್ಜಾಬಾಲರ ಆಶಯವಾಗಿದೆ. ಯದ್ಯಪಿ, ‹‹ಸರ್ವಾಂಗೋದ್ಧೂಳನಂ ಚಾಪಿ ನ ಸಮಾನಂ ತ್ರಿಪುಂಡ್ರಕೈಃ '' ಎಂಬ ವಾಯುವೀಯ ಸಂಹಿತಾವಚನವಿರುವುದರಿಂದ ತ್ರಿಪುಂಡ್ರಧಾರಣಕ್ಕೆ ಪ್ರಾಧಾನ್ಯವು ತೋರುತ್ತದೆ. ಆದರೂ ಪೂರ್ವೋಕ್ತವಾದ ಕೇದಾರ ಖಂಡಸ್ಥವಚನ ಪ್ರಮಾಣ ಬಲದಿಂದಲೂ, ‹‹ ತಸ್ಮಾದುದ್ಧೂಳನಂ ಪೂರ್ವಂ ತ್ರಿಪುಂಡ್ರಂಧಾರಯೇತ್ತತಃ '' ಎಂಬ ವಿದ್ಯೇಶ್ವರ ಸಂಹಿತಾವಚನ ಪ್ರಮಾಣ ಬಲ ದಿಂದಲೂ ಆ ವಾಯುವೀಯಸಂಹಿತಾವಚನಕ್ಕೆ ತ್ರಿಪುಂಡ್ರಪ್ರಾಶಸ್ತ್ಯವನ್ನು ಹೇಳು ವುದರಲ್ಲಿಯೇ ತಾತ್ಪರ್ಯವೆಂದು ತಿಳಿಯಬೇಕು.—

ಮತ್ತಂ, ಭಸ್ಮಧಾರಣವು ಪೂಜಾರ್ಥವೆಂದೂ, ಶುದ್ಧ್ಯರ್ಥವೆಂದೂ, ಎರಡು ಬಗೆಯಾಗಿರುತ್ತದೆ. ಪೂಜಾಕಾಲದಲ್ಲಿ ಜಲಮಿಶ್ರವಾದ ಭಸ್ಮದಿಂದಲೇ ಧಾರಣವಂ ಮಾಡಬೇಕು. ಶುದ್ಧ್ಯರ್ಥವಾಗುಪಯೋಗಿಸುವಾಗ್ಯೆ ಕೇವಲ ಭಸ್ಮದಿಂದಲೇ ಧಾರಣ ವಂ ಮಾಡಬೇಕು. ಎಂಬಲ್ಲಿ ಸಾಕ್ಷಿಯು,—

'' ಭಸ್ಮನೋದ್ಧೂಳನಂ ಕಾರ್ಯಂ ತ್ರಿಪುಂಡ್ರಂ ಚಾಪಿ ಭಕ್ತಿತಃ ||
ಪೂಜಾಕಾಲೇ ಹಿ ಸಜಲಂ ಶುದ್ಧ್ಯರ್ಥಂ ನಿರ್ಜಲಂ ಭವೇತ್ ''

'' ಶಙ್ಖತೋಯೇನ ಮೂಲೇನ ಭಸ್ಮನಾ ಮೇಳನಂ ಭವೇತ್'' ಎಂಬ ಬೃಹ ಜ್ಜಾಬಾಲಶ್ರುತಿಯು—ಭಸ್ಮವನ್ನು ಶಙ್ಖದಲ್ಲಿ ತುಂಬಿದ ನೀರಿನಿಂದ ಕಲಸಿ, ಮೂಲ ಮಂತ್ರದಿಂದ ಧರಿಸಬೇಕೆಂಬರ್ಥವನ್ನು ಹೇಳುತ್ತದೆ. ಈ ವಿಷಯದಲ್ಲಿ ಕೆಲಂಬರು ‹‹ ಮಧ್ಯಾಹ್ನಾತ್ಪ್ರಾಗ್ಜಲೈರ್ಯುಕ್ತಂ ತೋಯಂ ತದನು ವರ್ಜಯೇತ್ '' ಎಂಬ ವಚ ನಾನುಸಾರವಾಗಿ, ಮಧ್ಯಾಹ್ನಾತ್ಪೂರ್ವದಲ್ಲಿ ಜಲಸಹಿತ ಭಸ್ಮವನ್ನು ಧರಿಸಬೇಕೆಂ ದೂ, ಮಧ್ಯಾಹ್ನಾನಂತರದಲ್ಲಿ ಭಸ್ಮವನ್ನು ಜಲಮಿಶ್ರಮಾಡದೆ ಧರಿಸಬೇಕೆಂದೂ, ವ್ಯವಸ್ಥೆಯನ್ನು ಹೇಳುತ್ತಾರೆ. ‹‹ ದಿವಾ ವಾ ಯದಿ ವಾ ರಾತ್ರೌ ನಾರೀ ವಾಽಥ ನರೋಽಥವಾ || ಪೂಜಾರ್ಥಂ ಸಜಲಂ ಭಸ್ಮ ಶುದ್ಧ್ಯರ್ಥಂ ಕೇವಲಂ ಭವೇತ್'' ಎಂಬ ವಿಶೇಷ ವಿಧಿವಚನವು—ಸ್ತ್ರೀಪುರುಷರಲ್ಲಿ ಯಾರಾದರೂ ಹಗಲು ರಾತ್ರೆಗಳಲ್ಲೂ— ಪೂಜಾರ್ಥವಾಗಿ ಸಜಲ ಭಸ್ಮಧಾರಣವಂ ಮಾಡಬೇಕೆಂದೂ, ಶುದ್ಧ್ಯರ್ಥವಾಗಿ ಕೇ

ವಲ ಭಸ್ಮವನ್ನೇ ಧರಿಸಬೇಕೆಂದೂ, ಮಧ್ಯಾಹ್ನಾನಂತರದಲ್ಲೂ ಸಜಲಭಸ್ಮಧಾರಣವನ್ನೇ ವಿಧಿಸಿರುವುದರಿಂದ, ಮಧ್ಯಾಹ್ನಾನಂತರದಲ್ಲಿ ಜಲಮಿಶ್ರವಾದ ಭಸ್ಮವಂ ಧರಿಸಕೂಡದೆಂಬ ಆ ವ್ಯವಸ್ಥೆಯು ಅನ್ಯವಿಷಯಕವಾದದ್ದು. ಹ್ಯಾಗೆಂದರೆ, ಗೃಹಸ್ಥರೂ, ಸ್ತ್ರೀಯರೂ; ತ್ರಿಸನ್ಧ್ಯೆಗಳಲ್ಲಿಯೂ, ಜಲಮಿಶ್ರವಾದ ವಿಭೂತಿಯನ್ನು ಧರಿಸಬೇಕು. ಯತಿಗಳು ಎಲ್ಲಾಕಾಲದಲ್ಲೂ, ಜಲಮಿಶ್ರವಲ್ಲದ ವಿಭೂತಿಯನ್ನು ಧರಿಸಬೇಕು. ವಾನಪ್ರಸ್ಥರೂ, ಬ್ರಹ್ಮಚಾರಿಗಳೂ, ಕನ್ಯೆಯರೂ, ದೀಕ್ಷಾರಹಿತರೂ, ಮಧ್ಯಾಹ್ನದವರೆಗೆ ಜಲಮಿಶ್ರಭಸ್ಮವಂ ಧರಿಸಿ, ಅನಂತರದಲ್ಲಿ ಕೇವಲ ಭಸ್ಮವನ್ನೇ ಧರಿಸಬೇಕೆಂದು "ಧಾರ್ಯಂ ಭಸ್ಮ ತ್ರಿಸನ್ಧ್ಯಂ ತು ಗೃಹಿಣಾಂ ಜಲಸಂಯುತಮ್ || ಸರ್ವಕಾಲಂ ಭವೇತ್ಸ್ತ್ರೀಣಾಂ ಯತೀನಾಂ ಜಲವರ್ಜಿತಮ್ || ವನಸ್ಥವ್ರತಿಕನ್ಯಾನಾಮದೀಕ್ಷಿತನೃಣಾಂತಥಾ || ಮಧ್ಯಾಹ್ನಾತ್ಪ್ರಾಗ್ಜಲೈರ್ಯುಕ್ತಂ ಪರತೋ ಜಲವರ್ಜಿತಮ್" ಎಂಬ ವಚನಗಳು ಹೇಳುವುದರಿಂದ, ಮಧ್ಯಾಹ್ನಾನಂತರದಲ್ಲಿ ಜಲಮಿಶ್ರಭಸ್ಮಧಾರಣನಿಷೇಧವು— ವಾನಪ್ರಸ್ಥ ಬ್ರಹ್ಮಚಾರಿ ಕನ್ಯಾ ದೀಕ್ಷಾರಹಿತರಾದವರ ವಿಷಯದಲ್ಲೆಂದು ತಿಳಿಯತಕ್ಕದ್ದು.

ಜಲಮಿಶ್ರವಾದ ಭಸ್ಮದಿಂ ತ್ರಿಪುಣ್ಡ್ರಗಳಂ ಧರಿಸಿದವನಾಗಿ, ಶಿವಪೂಜೆಯಂ ಮಾಡತಕ್ಕ ಶಿವಭಕ್ತನಿಗೇ ಶಿವಪೂಜಾಫಲವು ಸಾಙ್ಗವಾಗುಂಟಾಗುವುದೆಂದು ನಿಶ್ಚೈಸಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.—

"ತ್ರಿಪುಣ್ಡ್ರಂ ಸಜಲಂ ಭಸ್ಮ ಧೃತ್ವಾ ಪೂಜಾಂ ತನೋತಿ ಯಃ ||
ಶಿವಪೂಜಾಫಲಂ ಸಾಙ್ಗಂ ತಸ್ಯೈವ ಹಿ ವಿನಿಶ್ಚಿತಮ್"

ಶುದ್ಧವೈದಿಕನಾದ ದ್ವಿಜೋತ್ತಮನು— ಮೋಕ್ಷಕಾಮಿಯಾಗಿದ್ದಾಗ್ಯೂ, ಐಶ್ವರ್ಯಕಾಮಿಯಾಗಿದ್ದಾಗ್ಯೂ ಜಲಮಿಶ್ರವಾದ ಭಸ್ಮದಿಂದಲೇ ತ್ರಿಪುಣ್ಡ್ರಗಳಂ ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

"ಭಸ್ಮನಾ ಸಜಲೇನೈವ ಧಾರಯೇಚ್ಚ ತ್ರಿಪುಣ್ಡ್ರಕಮ್ ||
ಮುಮುಕ್ಷುರ್ವಾ ಬುಭುಕ್ಷುರ್ವಾ ದ್ವಿಜೇನ್ದ್ರಶ್ಶುದ್ಧವೈದಿಕಃ"

ಭಸ್ಮೋದ್ಧೂಳನ ತ್ರಿಪುಣ್ಡ್ರಧಾರಣವಂ ಮನ್ತ್ರಕಲಾಪಗಳಿಲ್ಲದೆ, ಷಡಕ್ಷರಮನ್ತ್ರದಿಂದಾದರೂ ಧರಿಸಬಹುದೆಂದು ನಿರೂಪಿಸುವೆನದೆಂತೆನೆ.— ಶಿವಷಡಕ್ಷರಮಹಾ ಮನ್ತ್ರದಿಂ ಭಸ್ಮವನ್ನು ಏಳುಬಾರಿ ಅಭಿಮನ್ತ್ರಿಸಿ, ಆ ಮನ್ತ್ರದಿಂದಲೇ ಆ ಭಸ್ಮದಿಂದ ಉದ್ಧೂಳನಂಗೈದು ತ್ರಿಪುಣ್ಡ್ರಗಳಂ ಧರಿಸಬೇಕೆಂಬಲ್ಲಿ ಸಾಕ್ಷಿಯು.—

" ಷಡಕ್ಷರೇಣ ಸದ್ಭಸ್ಮ ಕೃತ್ವಾ ಸಪ್ತಾಭಿಮನ್ತ್ರಿತಮ್ ||
ಉದ್ಧೂಳಯೇತ್ತೇನ ದೇಹಂ ತ್ರಿಪುಣ್ಡ್ರಂ ಚಾಪಿ ಧಾರಯೇತ್ "

ತ್ರಿಪುಣ್ಡ್ರಗಳನ್ನು ಯಾವ ಕಾಲದಲ್ಲಿ ಎಷ್ಟು ಸ್ಥಾನಗಳಲ್ಲಿ ಹ್ಯಾಗೆ ರಚಿಸಬೇಕೆಂದರೆ,—ಸಾಧಕ ಶ್ರೇಷ್ಠನು--ಪ್ರತಿದಿವಸದಲ್ಲಿಯೂ ಜಲಮಿಶ್ರವಾದ ಭಸ್ಮದಿಂ ಶರೀರದ ಹದಿನೈದು ಸ್ಥಾನಂಗಳಲ್ಲಿ ತ್ರಿಪುಣ್ಡ್ರವಂ ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ತ್ರಿಪುಣ್ಡ್ರಂ ಧಾರಯೇನ್ನಿತ್ಯಂ ಭಸ್ಮನಾ ಸಜಲೇನ ವೈ ||
ಸ್ಥಾನೇಷು ಪಂಚದಶಸು ಶರೀರೇ ಸಾಧಕೋತ್ತಮಃ"

ಆ ಹದಿನೈದು ಸ್ಥಾನಗಳಾವವು ? ಯಾವ ಮನ್ತ್ರದಿಂ ತ್ರಿಪುಣ್ಡ್ರಗಳಂ ಧರಿಸಬೇಕು ? ಎಂದರೆ, ಸಾಧಕೋತ್ತಮರಾದ ಶಿವಭಕ್ತರು—ಶಿರಸ್ಸು, ಲಲಾಟ, ಕರ್ಣದ್ವಯ, ಕತ್ತು, ಭುಜದ್ವಯ, ವಕ್ಷಸ್ಥಲ, ನಾಭಿ, ಬೆನ್ನು, ಬಾಹುಮಧ್ಯದ್ವಯ, ಹೆಗ್ಗತ್ತು, ಮಣಿಬನ್ಧದ್ವಯ ಈ ಸ್ಥಾನಂಗಳಲ್ಲಿ ಪ್ರಣವಸಹಿತವಾದ ಪಂಚಾಕ್ಷರ ಮನ್ತ್ರದಿಂ ತ್ರಿಪುಣ್ಡ್ರಗಳಂ ರಚಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಉತ್ತಮಾಂಗೇ ಲಲಾಟೇ ಚ ಶ್ರವಣದ್ವಿತಯೇ ತಥಾ ||
ಗಳೇ ಭುಜದ್ವಯೇ ಚೈವ ಹೃದಿ ನಾಭೌ ಚ ಪೃಷ್ಠಕೇ ||
ಬಾಹುಮಧ್ಯೇ ಕಕುದ್ದೇಶೇ ಮಣಿಬನ್ಧದ್ವಯೇ ತಥಾ ||
ತ್ರಿಪುಣ್ಡ್ರಂ ಭಸ್ಮನಾ ಧಾರ್ಯಂ ಮೂಲಮನ್ತ್ರೇಣ ಸಾಧಕೈಃ "

ಭಸ್ಮವನ್ನಭಿಮಂತ್ರಿಸಿ, ಆ ಭಸ್ಮದಿಂ ಮನ್ತ್ರೋಚ್ಚಾರಣ ಪೂರ್ವಕವಾಗಿ ತ್ರಿಪುಣ್ಡ್ರಗಳಂ ಧರಿಸುವುದರಿಂದ ಫಲವೇನು ? ಎಂದರೆ, ವಾಮಕರತಲದಲ್ಲಿ ಭಸ್ಮವನ್ನಿರಿಸಿಕೊಂಡು, ಅದನ್ನು ಬಲಹಸ್ತದಿಂದಾಚ್ಛಾದಿಸಿ " ಅಗ್ನಿರಿತಿ ಭಸ್ಮ" ಎಂಬುದು ಮೊದಲಾದ ಮನ್ತ್ರದಿಂ ಸ್ಪರ್ಶಮಾಡಿ, ಏಳುಬಾರಿ ಮಂತ್ರಿಸಿ, ಜಲಮಿಶ್ರಿತಮಾದಾಭಸ್ಮದಿಂ ಹೇಳಲ್ಪಟ್ಟ ಸ್ಥಾನಂಗಳಲ್ಲಿ ತ್ರಿಪುಣ್ಡ್ರಗಳಂ ಧರಿಸತಕ್ಕವನು—ರಾಗದ್ವೇಷಗಳಿಲ್ಲದವನೂ, ಎಲ್ಲರಿಗೂ ಮಙ್ಗಳಗಳನ್ನುಂಟುಮಾಡುವವನೂ ಆದ ಶಿವನನ್ನು ಹೊಂದುವನು ಎಂಬೀ ವಿಷಯದಲ್ಲಿ ಸನ್ದೇಹವಿಲ್ಲವು. ಎಂಬಲ್ಲಿ ಸಾಕ್ಷಿಯು.—

" ವಾಮಹಸ್ತತಳೇ ಭಸ್ಮ ಕ್ಷಿಪ್ತ್ವಾಽಽಚ್ಛಾದ್ಯಾನ್ಯಪಾಣಿನಾ ||
ಅಗ್ನಿರಿತ್ಯಾದಿಭಿರ್ಮನ್ತ್ರೈಃ ಸ್ಪೃಶಂತ್ಸಪ್ತಾಭಿಮನ್ತ್ರಿತಮ್ ||
ತ್ರಿಪುಣ್ಡ್ರಮುಕ್ತಸ್ಥಾನೇಷು ಧಧ್ಯಾತ್ಸಜಲಭಸ್ಮನಾ ||
ಶಿವಂ ಶಿವಕರಂ ಶಾನ್ತಂ ಸ ಪ್ರಾಪ್ನೋತಿ ನ ಸಂಶಯಃ"

ತ್ರಿಪುಣ್ಡ್ರರಚನಪ್ರಮಾಣವೇನೆನೆ.—ತನ್ನ ದಕ್ಷಿಣಹಸ್ತದ ತರ್ಜನೀ ಮಧ್ಯ ಮಾನಾಮಿಕಾಂಗುಳಿತ್ರಯದಿಂ ಷಡಂಗುಲ ಪ್ರಮಾಣದಿಂದ ಅಥವಾ ಹೆಚ್ಚಾಗಿ ನೇತ್ರದ್ವಯ ಪ್ರಮಾಣದಿಂದ ಲಲಾಟದಲ್ಲಿ ತ್ರಿಪುಣ್ಡ್ರಗಳನ್ನು ರಚಿಸಬೇಕೆಂಬಲ್ಲಿ ಸಾಕ್ಷಿಯು.—

" ಮಧ್ಯಾಙ್ಗುಲಿತ್ರಯೇಣೈವ ಸ್ವದಕ್ಷಿಣಕರಸ್ಯ ತು ||
. ಷಡಙ್ಗುಲಾಯತಂ ಮಾನಮಪಿ ವಾಽಧಿಕಮಾನಕಮ್ ||
ನೇತ್ರಯುಗ್ಮಪ್ರಮಾಣೇನ ಫಾಲೇ ದದ್ಯಾತ್ತ್ರಿಪುಣ್ಡ್ರಕಮ್ "

ಪ್ರಕಾರಾನ್ತರಮುಂಟೋ ? ಎಂದರೆ,— ಮಧ್ಯಮಾನಾಮಿಕೆಗಳಿಂಡೆದು ಬಲಕ್ಕೆ ಎರಡುರೇಖೆಗಳಂ ಮಾಡಿ, ಅವುಗಳ ನಡುವೆ ಅಂಗುಷ್ಠದಿಂದ ಬಲದಿಂದ ಕ್ಕೊಂದು ರೇಖೆಯಂ ಮಾಡಿ, ಈ ಪ್ರಕಾರದಿಂ ತ್ರಿಪುಣ್ಡ್ರಗಳಂ ಧರಿಸತಕ್ಕವನು-ಪ್ರತ್ಯಕ್ಷಶಿವನೇ ಸರಿ; ಸನ್ದೇಹಮಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಮಧ್ಯಮಾನಾಮಿಕಾಙ್ಗುಷ್ಠೈರನುಲೋಮವಿಲೋಮತಃ ||
ಧಾರಯೇದ್ಯಸ್ತ್ರಿಪುಣ್ಡ್ರಾಙ್ಕಂ ಸ ರುದ್ರೋ ನಾತ್ರಸಂಶಯಃ "

" ಯ ಇದಂ ತ್ರಿಪುಣ್ಡ್ರಂ ಧರತಿ ಸ ವೇದತ್ರಯಧಾರೀ ಭವತಿ ಸ ಸತ್ತಂ ತ್ರೇತಾಗ್ನಿರ್ಭವತಿ ಸ ಪುಷ್ಕರತ್ರಯಸ್ನಾತೋ ಭವತಿ ಯಸ್ತ್ರಿಪುಣ್ಡ್ರಧಾರೀ ಪುರುಷಸ್ಸರುದ್ರಸ್ಸ ಪರಮೇಷ್ಠೀ ಯ ಇದಂತ್ರಿಪುಣ್ಡ್ರಂ ಧೃತವನ್ತಂ ಪುರುಷಂ ಪಶ್ಯೇ ಸ ಸರ್ವಪಾಪೇಭ್ಯೋ ವಿನಿರ್ಮುಕ್ತೋ ಭವತಿ ಸ ಸರ್ವವೇದಾಧ್ಯಯನಜನ್ಮಫಲವಾನ್ಭವತಿ " ಎಂಬ ವೃದ್ಧಜಾಬಾಲಶ್ರುತಿಯಿರುವುದರಿಂದ ಭಸ್ಮದಿಂದ ಋಜುಶ್ವೇತಾದಿ ಸಲ್ಲಕ್ಷಣಯುಕ್ತವಾದ ತ್ರಿಪುಣ್ಡ್ರವನ್ನು ಯಾವನು—ಧರಿಸುತ್ತಿಹನೋ, ಅವನು ಶಿವಧರ್ಮಸಹಿತನಾಗಿ, ವೇದತ್ರಯಸ್ವರೂಪನಾಗುವನು. ಆದ್ದರಿಂದ ಪ್ರಾತರಾದಿಕಾಲತ್ರಯದಲ್ಲಿ ಯಾವನು—ತ್ರಿಪುಣ್ಡ್ರವಂ ಧರಿಸುತ್ತಾನೋ, ಅವನು—ಶಿವಸಮಾನನೇ ಸರಿ; ಸಂಶಯವಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಪ್ರಾತಃಕಾಲೇ ಚ ಮಧ್ಯಾಹ್ನೇ ಸಾಯಾಹ್ನೇ ಚ ತ್ರಿಪುಣ್ಡ್ರಕಮ್ ||
ಕದಾಚಿದ್ಭಸ್ಮನಾಕುರ್ಯಾತ್ಸ ರುದ್ರೋ ನಾತ್ರ ಸಂಶಯಃ ||
ಏವಂವಿಧಂವಿಭೂತ್ಯಾ ತು ಕುರುತೇ ಯಸ್ತ್ರಿಪುಣ್ಡ್ರಕಮ್ ||
ಸ ಶೈವಧರ್ಮಸಂಯುಕ್ತಸ್ತ್ರಯೀಮಯ ಇತಿ ಶ್ರುತಿಃ "

ಈ ಪ್ರಕಾರವಾದ ಭಸ್ಮತ್ರಿಪುಣ್ಡ್ರಧಾರಣವು ಯಾರಿಂದಂಗೀಕರಿಸಲ್ಪಟ್ಟಿತೆಂದರೆ,—ಬ್ರಹ್ಮ ವಿಷ್ಣು ರುದ್ರರೂ, ಇನ್ದ್ರಾದಿ ದೇವತೆಗಳೂ, ಶ್ರುತಿಕೋವಿದರಾದ

ವಸಿಷ್ಠಾದಿ ಮುನಿಗಳೂ, ಭಸ್ಮತ್ರಿಪುಣ್ಡ್ರವಂ ಯಾವಾಗಲೂ ಭಕ್ತಿಯಿಂ ಧರಿಸುತ್ತಿಹರು. ಎಂಬಲ್ಲಿ ಸಾಕ್ಷಿಯು.—

" ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ದೇವಾಶ್ಶಕ್ರಪುರೋಗಮಾಃ ||
ತ್ರಿಪುಣ್ಡ್ರಂ ಧಾರಯನ್ತ್ಯೇವ ಭಸ್ಮನಾ ಪರಿಕಲ್ಪಿತಮ್ ||
ವಸಿಷ್ಠಾದ್ಯಾ ಮಹಾಭಾಗಾ ಮುನಯಶ್ಶ್ರುತಿಕೋವಿದಾಃ ||
ಧಾರಯನ್ತಿ ಸದಾ ಭಕ್ತ್ಯಾ ತ್ರಿಪುಣ್ಡ್ರಂ ಭಸ್ಮನಾ ಕೃತಮ್ "

ಈ ಭಸ್ಮತ್ರಿಪುಣ್ಡ್ರಧಾರಣವಿಚಾರವು ಎಲ್ಲಿ ವಿಧಿಸಲ್ಪಟ್ಟಿರುವುದೆಂದರೆ,-ಶಿವಾಗಮಗಳಲ್ಲಿಯೂ, ವೇದಗಳಲ್ಲಿಯೂ, ಪುರಾಣಗಳಲ್ಲಿಯೂ, ಸ್ಮೃತಿಗಳಲ್ಲಿಯೂ, ಭಾರತವೊದಲಾದ ಇತಿಹಾಸಗಳಲ್ಲಿಯೂ, ಕಲ್ಪಸೂತ್ರಗಳಲ್ಲಿಯೂ, ಭಸ್ಮತ್ರಿಪುಣ್ಡ್ರವು ಸರ್ವರಿಗೂ ಧರಿಸಲು ಯೋಗ್ಯವೆಂದೂ, ಶಿವಭಕ್ತರಿಗೆ ವಿಶೇಷವಾಗಿ ಧರಿಸಲು ಯೋಗ್ಯವೆಂದೂ, ವಿಧಿಸಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.—

" ಶೈವಾಗಮೇಷು ವೇದೇಷು ಪುರಾಣೇಷ್ವಖಿಲೇಷು ಚ ||
ಸ್ಮೃತೀತಿಹಾಸಕಲ್ಪೇಷು ವಿಹಿತಂ ಭಸ್ಮಪುಣ್ಡ್ರಕಮ್ ||
ಧಾರಣೀಯಂ ಸಮಸ್ತಾನಾಂ ಶೈವಾನಾಂ ಚ ವಿಶೇಷತಃ "

ವೇದೋಕ್ತವಾದ ಆಚಾರಗಳಿಗೆ ವಿರುದ್ಧವಾದ ಆಚಾರಗಳಲ್ಲಾಸಕ್ತನಾದುದರಿಂದಲೇ ದುರಾಚಾರನಿರತನಾದ ನಾಸ್ತಿಕನು ಶರೀರೇನ್ದ್ರಿಯಬುದ್ಧಿಗಳಿಂದ ಬೇರೆಯಾಗಿ, ಆತ್ಮನಿಲ್ಲವೆಂದು ಪ್ರತಿಪಾದಿಸುವನಾದುದರಿಂದಲೇ ದುರಾಚಾರನಿರತನಾದ ಚಾರ್ವಾಕ ವೊದಲಾದವರು ಭಸ್ಮತ್ರಿಪುಣ್ಡ್ರಗಳಂಧರಿಸಿದವರಾದೊಡೆ, ಸಕಲಪಾಪಗಳಿಂದ ಬಿಡಲ್ಪಡುತ್ತಾರೆ. ಎಂಬಲ್ಲಿ ಸಾಕ್ಷಿಯು.—

" ನಾಸ್ತಿಕೋ ಭಿನ್ನಮರ್ಯಾದೋ ದುರಾಚಾರಪರಾಯಣಃ ||
ಭಸ್ಮತ್ರಿಪುಣ್ಡ್ರಧಾರೀ ಚೇನ್ಮುಚ್ಯತೇ ಸರ್ವಕಿಲ್ಬಿಷೈಃ "

ಇತಿ ಶ್ರೀಮತ್ಪರಶಿವ ಚರಣ ಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲ
ಜ್ಞಾನ ವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದ
ವಾಕ್ಯಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವ
ಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾ
ಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿ
ಯೊಳ್ ಅಷ್ಟಾವರಣ ಪ್ರಕರಣದಲ್ಲಿ ಭಸ್ಮ
ಸ್ಥಲನಿರೂಪಣಮ್.



|| ಶ್ರೀಃ ||

ವಿಶ್ವೇಶ್ವರಾಯನಮಃ

# ರುದ್ರಾಕ್ಷಸ್ಥಲಮ್.



ಭಸ್ಮದಿಂದ ಸ್ನಾನೋದ್ಧೂಳನಂಗೈದು, ಪಣೆ ಮೊದಲಾದ ಉಕ್ತವಾದ ಸ್ಥಾನಂಗಳಲ್ಲಿ ತ್ರಿಪುಣ್ಡ್ರಗಳಂ ಧರಿಸಿ, ಲಿಙ್ಗಪೂಜಾನಿರತನಾದ ಭಕ್ತನು-ರುದ್ರಾಕ್ಷಗಳನ್ನೂ ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಭಸ್ಮನಾ ವಿಹಿತಸ್ನಾನಸ್ತ್ರಿಪುಣ್ಡ್ರಾಙ್ಕಿತಮಸ್ತಕಃ ||
ಶಿವಪೂಜಾಪರೋ ನಿತ್ಯಂ ರುದ್ರಾಕ್ಷಮಪಿ ಧಾರಯೇತ್ "

ಕೆಟ್ಟಮನಸ್ಸುಳ್ಳವರೂ, ಕೆಟ್ಟನಡವಳಿಕೆಗಳುಳ್ಳವರೂ, ಕೆಟ್ಟಬುದ್ಧಿಯುಳ್ಳವರೂ ರುದ್ರಾಕ್ಷಧಾರಣದದೆಸೆಯಿಂದ ಸಕಲಪಾಪಗಳಿಂ ಬಿಡಲ್ಪಡುತ್ತಿಹರು. ಎಂಬಲ್ಲಿ ಸಾಕ್ಷಿಯು.—

" ದುಷ್ಟಚಿತ್ತಾ ದುರಾಚಾರಾ ದುಷ್ಪ್ರಜ್ಞಾ ಅಪಿ ಮಾನವಾಃ||
ರುದ್ರಾಕ್ಷಧಾರಣಾದೇವ ಮುಚ್ಯನ್ತೇ ಸರ್ವಪಾತಕೈಃ "

ರುದ್ರಾಕ್ಷಗಳೆಂತು ಪುಟ್ಟಿದವು? ಇವುಗಳಿಗೆ ಯಾವಕಾರಣದಿಂದೀಶಕ್ತಿಯುಂಟಾಯಿತು? ಎಂದರೆ, " ಪುರಾ ತ್ರಿಪುರವಧಾಯೋನ್ಮೀಲಿತಾಕ್ಷೋಽಹನ್ತೇಭ್ಯೋ ಜಲಬಿನ್ದವೋ ಭೂಮೌ ಪತಿತಾಸ್ತೇ ರುದ್ರಾಕ್ಷಾ ಜಾತಾಃ ಸರ್ವಾನುಗ್ರಹಾರ್ಥಾಯ ತೇಷಾಂ ನಾಮೋಚ್ಚಾರಣಮಾತ್ರೇಣ ದಶಶತಗೋದಾನಫಲಂ ಭವತಿ ದರ್ಶನಸ್ಪರ್ಶನಾಭ್ಯಾಂ ದ್ವಿಗುಣತ್ರಿಗುಣಫಲಂ ಭವತಿ ಅತ ಊರ್ಧ್ವಂ ವಕ್ತುಂ ನ ಶಕ್ಯತೇ " ಎಂಬ ಬೃಹಜ್ಜಾಬಾಲಶ್ರುತಿಯುಂಟಾಗಿ, ತ್ರಿನೇತ್ರನೂ ಜಗನ್ನಾಯಕನೂ ಆದ ಪರಶಿವನು-ತ್ರಿಪುರಧ್ವಂಸವಂ ಮಾಡಲು ಪ್ರವರ್ತಿಸಿದಾಗ್ಯೆ ತೆರೆಯಲ್ಪಟ್ಟ ಕಣ್ಗಳುಳ್ಳವನಾಗಿ, ತ್ರಿಪುರಗಳ ಕೀಲನ್ನು ಮೇಲಕ್ಕೆ ನೋಡಿದನು. ಆಗ ಆ ಶಿವನ ನೇತ್ರಗಳತ್ತಣಿಂ ನೆಲದಮೇಲೆ ಬಿದ್ದ ಅನೇಕವಾದ ನೀರ ಹನಿಗಳಿಂದ ರುದ್ರಾಕ್ಷಗಳ್ ಪುಟ್ಟಿದವು. ಅವು ರುದ್ರ ನೇತ್ರಂಗಳಿಂದ ಹುಟ್ಟಿದವುಗಳಾದುದರಿಂದ ರುದ್ರಾಕ್ಷಗಳು ಎಂದು ಪ್ರಸಿದ್ಧಿಯನ್ನು ಹೊಂದಿ, ಲೋಕಪಾವನವಾದವು. ಎಂಬಲ್ಲಿ ಸಾಕ್ಷಿಯು.-

" ಪುರಾ ತ್ರಿಪುರಸಹ್ಮಾರೇ ತ್ರಿನೇತ್ರೋ ಜಗತಾಂ ಪತಿಃ ||
ಉದಪಶ್ಯತ್ಪರಾಂ ಯೋಗಮುನ್ಮೀಲಿತವಿಲೋಚನಃ ||

ನಿಪೇತುಸ್ತಸ್ಯ ನೇತ್ರೇಭ್ಯೋ ಬಹವೋ ಜಲಬಿನ್ದವಃ ||
ತೇಭ್ಯೋ ಜಾತಾ ಹಿ ರುದ್ರಾಕ್ಷಾ ರುದ್ರಾಕ್ಷಾ ಇತಿಕೀರ್ತಿತಾಃ ||
ರುದ್ರನೇತ್ರಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾಃ ''

ಈ ಪ್ರಕಾರವಾಗಿ ರುದ್ರನೇತ್ರಗಳಿಂದ ಜನಿಸಿದವಾದ್ದರಿಂದ, ತತ್ಕಲಾಭೇದದಿಂ ಮೂವತ್ತೆಂಟು ಭೇದದಿಂದ ಜನಿಸಿದವು. ಎಂಬಲ್ಲಿ ಸಾಕ್ಷಿಯು.—

" ಅಷ್ಟತ್ರಿಂಶತ್ಪ್ರಭೇದೇನ ಭವನ್ತ್ಯುತ್ಪತ್ತಿ ಭೇದತಃ ''

ಯಾವ ನೇತ್ರದಿಂದೆಷ್ಟುಂಟಾದವೆಂದರೆ, ಶಿವನ-ತಪಿನ್ಯಾದಿದ್ವಾದಶಕಲಾತ್ಮಕವಾದ ಸೂರ್ಯನೇತ್ರದಿಂದ ಕಪಿಲವರ್ಣವಾದ ದ್ವಾದಶಭೇದವುಳ್ಳ ರುದ್ರಾಕ್ಷಗಳ್ ಪುಟ್ಟಿದವು. ಅಮೃತಾದಿ ಷೋಡಶಕಲಾತ್ಮಕವಾದ ಚನ್ದ್ರನೇತ್ರದತ್ತಣಿಂ ಶ್ವೇತವರ್ಣಮಾದ ಷೋಡಶಭೇದವುಳ್ಳ ರುದ್ರಾಕ್ಷಗಳ್ ಪುಟ್ಟಿದವು. ಧೂಮ್ರಾರ್ಚಿರಾದಿದಶಕಲಾಮಯವಾದ ವಹ್ನಿನೇತ್ರದಿಂದ ಕೃಷ್ಣವರ್ಣಮೂದ ದಶಭೇದವುಳ್ಳ ರುದಾಕ್ಷಗಳ್ ಪುಟ್ಟಿದವು. ಈ ಪ್ರಕಾರವಾದ ಉತ್ಪತ್ತಿಭೇದದಿಂದ ರುದ್ರಾಕ್ಷಗಳು ಬಹು ಪ್ರಕಾರವಾಗಿ ಹುಟ್ಟಿದವು. ಎಂಬಲ್ಲಿ ಸಾಕ್ಷಿಯು.—

" ನೇತ್ರಾತ್ತುಸೂರ್ಯಾತ್ಮನಶ್ಯಮ್ಭೋಃ ಕಪಿಲಾ ದ್ವಾದಶೋದಿತಾಃ ||
ಶ್ವೇತಾಷ್ಷೋಡಶಸಂಜಾತಾಸ್ಸೋಮರೂಪಾದ್ವಿಲೋಚನಾತ್ ||
ಕೃಷ್ಣಾದಶವಿಧಾಜಾತಾ ವಹ್ನಿರೂಪಾದ್ವಿಲೋಚನಾತ್ ||
ಏವಮುತ್ಪತ್ತಿತೋಭೇದಾ ರುದ್ರಾಕ್ಷಾ ಬಹುಧಾ ಸ್ಮೃತಾಃ ''

ಬಳಿಕ ಧಾರಣಾರ್ಹವಾದ ರುದ್ರಾಕ್ಷಗಳ ಸ್ವರೂಪವು ಹ್ಯಾಗಿರಬೇಕೆಂದರೆ,-ರನ್ಧ್ರಗಳಿಲ್ಲದ, ಚಿನ್ನದ ವರೆಯುಳ್ಳ, ಅನ್ಯರಿಂಧರಿಸಲ್ಪಡದ ರುದ್ರಾಕ್ಷವು-ಉತ್ತಮವು. ಅದನ್ನು ಲಿಂಗಪೂಜಾಪರಾಯಣನೂ, ಜ್ಞಾನಿಯೂ, ಆದ ಪುರುಷನು-ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಅಚ್ಛಿದ್ರಂ ಕನಕಪ್ರಖ್ಯಮನನ್ಯಧೃತಮುತ್ತಮಮ್ ||
ರುದ್ರಾಕ್ಷಂ ಧಾರಯೇತ್ಪ್ರಾಜ್ಞಃ ಶಿವಪೂಜಾಪರಾಯಣಃ ''

ಸ್ಥಾನ ಮುಖವ್ಯತ್ಯಾಸವಂ ಮಾಡದೆ, ವಿಧಿಕ್ರಮಗಳನ್ನು ಮಾಱದೆ, ರುದ್ರಸಾಯುಜ್ಯಸಿದ್ಧ್ಯರ್ಥಮಾಗಿ, ರುದ್ರಾಕ್ಷಧಾರಣವಂ ಪೇಳುವೆನದೆಂತೆನೆ.—ಶಿಖೆಯಲ್ಲಿ ಏಕಮುಖದೊಂದುರುದ್ರಾಕ್ಷವನ್ನು, ಶಿರಸ್ಸಿನಲ್ಲಿ ಎರಡುಮುಖದೊಂದುರುದ್ರಾಕ್ಷವನ್ನೂ, ಮೂರುಮುಖದೊಂದುರುದ್ರಾಕ್ಷವನ್ನೂ, ಹನ್ನೆರಡುಮುಖದಒಂದುರುದ್ರಾಕ್ಷವನ್ನೂ, ಹೀಗೆ ಮೂರು ರುದ್ರಾಕ್ಷಗಳನ್ನು, ತಲೆಯಸುತ್ತಲೂ ಹನ್ನೊಂದುಮುಖ

ಗಳುಳ್ಳ ರುದ್ರಾಕ್ಷಗಳಮುವತ್ತಾರನ್ನೂ, ಕರ್ಣಗಳೆರಡರಲ್ಲಿ ಹತ್ತುಮುಖದ ಎರಡು ರುದ್ರಾಕ್ಷಗಳನ್ನೂ ಏಳುಮುಖಗಳುಳ್ಳ ಎರಡು ರುದ್ರಾಕ್ಷಗಳನ್ನೂ, ಐದುಮುಖಗಳುಳ್ಳವೆರಡುರುದ್ರಾಕ್ಷಗಳನ್ನೂ ಈ ಪ್ರಕಾರವಾಗಿ ಆರುರುದ್ರಾಕ್ಷಗಳನ್ನು ಧರಿಸಬೇಕು. "ಕರ್ಣಯೋರೇಕಮೇಕಮ್" ಎಂಬ ರುದ್ರಾಕ್ಷಜಾಬಾಲಶ್ರುತಿಯುಂಟಾಗಿ, ಕಿವಿಗಳಲ್ಲಿ ಒಂದೊಂದನ್ನಾದರೂ ಧರಿಸಬಹುದು. ಕಂಠದಲ್ಲಿ ಆರುಮುಖದ ಹದಿನಾರು ರುದ್ರಾಕ್ಷಗಳನ್ನೂ ಎಂಟುಮುಖದ ಹದಿನಾರು ರುದ್ರಾಕ್ಷಗಳನ್ನೂ, ಹೀಗೆ ಸಮವಾಗಿ ಮೂವತ್ತೆರಡು ರುದ್ರಾಕ್ಷಗಳಂ ಧರಿಸಬೇಕು. ಹೃದಯದಲ್ಲಿ ನಾಲ್ಕುಮುಖದ ಐವತ್ತು ರುದ್ರಾಕ್ಷಗಳ ಮಾಲಿಕೆಯಂ ಧರಿಸಬೇಕು. ಹದಿಮೂರುಮುಖದ ಹದಿನಾರು ಹದಿನಾರು ರುದ್ರಾಕ್ಷಗಳ ಮಾಲೆಯಂ ತೋಳ್ಗಳಲ್ಲಿ ಧರಿಸಬೇಕು. ಒಂಭತ್ತು ಮುಖದ ಹನ್ನೆರಡು ಹನ್ನೆರಡು ರುದ್ರಾಕ್ಷಗಳ ಮಾಲೆಯಂ ಮಣಿಬಂಧದಲ್ಲಿ ಧರಿಸಬೇಕು. ಹದಿನಾಲ್ಕುಮುಖದ ನೂರೆಂಟು ರುದ್ರಾಕ್ಷಗಳ ಮಾಲೆಯಂ ಯಜ್ಞಸೂತ್ರವನ್ನಾಗಿ ಧರಿಸಬೇಕು. ಎಂಬಲ್ಲಿ ಸಾಕ್ಷಿಯು.—

"ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ ||
ದ್ವಿಸ್ತ್ರಿದ್ವಾರ್ದಶವಕ್ತ್ರಾಂಸ್ತು ಶಿರಸಿ ತ್ರೀನ್ವಿಧಾರಯೇತ್ ||
ಧಾರ್ಯಾನ್ಮೂರ್ಧ್ನಃ ಪರಿತಷ್ಷಟ್ತ್ರಿಂಶದೇಕಾದಶಾನನಾನ್ ||
ದಶಸಪ್ತಪಞ್ಚವಕ್ತ್ರಾನ್ ಷಟ್ಷಟ್ಕರ್ಣದ್ವಯೇ ವಹೇತ್ ||
ಷಡಷ್ಟವದನಾನ್ಕಣ್ಠೇ ದ್ವಾತ್ರಿಂಶದ್ಧಾರಯೇತ್ಸದಾ ||
ಪಞ್ಚಾಶದ್ಧಾರಯೇದ್ಧೀಮಾಂಶ್ಚತುರ್ವಕ್ತ್ರಾಂಸ್ತು ವಕ್ಷಸಿ ||
ತ್ರಯೋದಶಮುಖಾನ್ಬಾಹ್ವೋರ್ಧರೇತ್ಷೋಡಶಷೋಡಶ ||
ಪ್ರತ್ಯೇಕಂ ದ್ವಾದಶ ವಹೇನ್ನವಾಸ್ಯಾನ್ಮಣಿಬನ್ಧಯೋಃ ||
ಚತುರ್ದಶಮುಖಂ ಯಜ್ಞಸೂತ್ರಮಷ್ಟೋತ್ತರಂಶತಮ್ ||
ಧಾರಯೇತ್ಸಾರ್ವಕಾಲನ್ತು ರುದ್ರಾಕ್ಷಾನ್ ಲಿಙ್ಗಪೂಜಕಃ"

"ಯೋ ರುದ್ರಾಕ್ಷಂ ಧತ್ತೇ ಸತ್ಯಂ ಪರಮಶಿವಸ್ಸ ಸತ್ಯಂ ಪರಮಶಿವಃ" ಎಂಬ ಶ್ರುತಿಯುಂಟಾಗಿ, ಈ ಪ್ರಕಾರವಾಗಿ ರುದ್ರಾಕ್ಷಗಳಂ ಧರಿಸಿದವನು—ಸಾಕ್ಷಾತ್ ಶಿವನೇ ಸರಿ; ಎಂಬುದರ್ಥವು.

ಈ ಪ್ರಕಾರವಾಗಿ ಯಾವನು—ಉಕ್ತಸ್ಥಾನಂಗಳಲ್ಲಿ ಯಾವಾಗಲೂ ರುದ್ರಾಕ್ಷಗಳನ್ನು ಧರಿಸುತ್ತಾನೆಯೋ, ಆತನು—ಮೂಢನಾಗಿದ್ದರೂ, ಅವನಿಗೆ ಪಾಪಸಮ್ಬನ್ಧವೇ ಉಂಟಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಏವಂ ರುದ್ರಾಕ್ಷಧಾರೀ ಯಸ್ಸರ್ವಕಾಲನ್ತು ವರ್ತತೇ ||
ತಸ್ಯ ಪಾಪಕಥಾ ನಾಸ್ತಿ ಮೂರ್ಢಸ್ಯಾಪಿ ನ ಸಂಶಯಃ"

ರುದ್ರಾಕ್ಷಧಾರಿಗೆ—ಕ್ಷುದ್ರಪಾಪ ಮಹಾಪಾಪಗಳ ಸಬ್ಬನ್ಧವಿಲ್ಲವೋ ? ಎಂದರೆ,— ಬ್ರಹ್ಮಹತ್ಯೆಯಂ ಮಾಡಿದವನೂ, ಮದ್ಯಪಾನವಂ ಮಾಡಿದವನೂ, ಸ್ವರ್ಣಸ್ತೇಯವಂ ಮಾಡಿದವನೂ, ಗುರುಪತ್ನಿಗಳುಪಿದವನೂ, ತಾಯ್ತಂದೆಗಳಂ ಕೊಂದವನೂ, ಭ್ರೂಣಹತ್ಯೆಯಂ ಮಾಡಿದವನೂ, ಮಾಡಿದ ಉಪಕಾರವಂ ಮರೆತ ವನೂ, ರುದ್ರಾಕ್ಷಧಾರಣಮಾತ್ರದಿಂ ತತ್ಪಾಪಗಳಿಂದ ಬಿಡಲ್ಪಡುತ್ತಾನಲ್ಲದೆ, ಮಿಕ್ಕ ಪಾಪಗಳಿಂದಲೂ ಬಿಡಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಬ್ರಹ್ಮಹಾ ಮದ್ಯಪಾಯೀ ಚ ಸ್ವರ್ಣಹೃದ್ಗುರುತಲ್ಪಗಃ ||
ಮಾತೃಹಾ ಪಿತೃಹಾ ಚೈವ ಭ್ರೂಣಹಾ ಕೃತಘಾತಕಃ ||
ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ"

ಮತ್ತೂ ರುದ್ರಾಕ್ಷಗಳಂ ನೋಡುವುದರಿಂದಲೂ, ಮುಟ್ಟುವುದರಿಂದಲೂ, ಸ್ಮರಿಸುವುದರಿಂದಲೂ, ಪೂಜಿಸುವುದರಿಂದಲೂ, ಜನರು—ಸಕಲ ಪಾಪಗಳಿಂದ ಬಿಡ ಲ್ಪಡುತ್ತಾರೆ. ಎಂಬಲ್ಲಿ ಸಾಕ್ಷಿಯು.—

" ದರ್ಶನಾತ್ಸ್ಪರ್ಶನಾಚ್ಚೈವ ಸ್ಮರಣಾತ್ಪೂಜನಾದಪಿ ||
ರುದ್ರಾಕ್ಷಧಾರಣಾಲ್ಲೋಕೇ ಮುಚ್ಯನ್ತೇ ಪಾತಕೈರ್ಜನಾಃ"

ಇಲ್ಲಿ ಜನಶಬ್ದದಿಂದಾವಜನಗಳಂ ಪೇಳುವುದೆಂದರೆ,-ಬ್ರಾಹ್ಮಣನೂ, ಅನ್ತ್ಯ ಜನೂ, ಮೂರ್ಖನೂ, ಪಣ್ಡಿತನೂ ರುದ್ರಾಕ್ಷಧಾರಣಮಾತ್ರದಿಂ ಸಕಲ ಪಾಪಗಳಿಂದ ಬಿಡಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಬ್ರಾಹ್ಮಣೋವಾನ್ತ್ಯಜೋವಾಪಿಮೂರ್ಖೋವಾಪಣ್ಡಿತೋಽಪಿವಾ ||
ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ"

ಈ ರುದ್ರಾಕ್ಷಧಾರಣದಿಂ ಪಾಪವಿನಾಶವಾಗುವುದಲ್ಲದೆ, ಬೇರೆ ಫಲಗಳು ಉಂಟಾಗುವವೋ ? ಎಂದರೆ, ಈ ಲೋಕದಲ್ಲಿ ಕೋಟಿಗೋದಾನವಂ ಮಾಡಿದವನು ಯಾವ ಫಲವನ್ನು ಪಡೆಯುವನೋ, ಆ ಫಲವನ್ನು ನಿತ್ಯದಲ್ಲೂ ರುದ್ರಾಕ್ಷಧಾರಣೆ ಯಂ ಮಾಡಿದ ಪುರುಷನು ಪಡೆಯುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಧೇನುಕೋಟಿಪ್ರದಾತಾ ತು ಯತ್ಫಲಂ ಲಭತೇ ಭುವಿ ||
ತತ್ಫಲಂ ಲಭತೇ ಮರ್ತ್ಯೋ ನಿತ್ಯಂ ರುದ್ರಾಕ್ಷಧಾರಣಾತ್"

ಮತ್ತಂ ರುದ್ರಾಕ್ಷಧಾರಣಫಲವು—ಮನುಷ್ಯೇತರ ಪ್ರಾಣಿಗಳಿಗೂ ಉಂಟೋ ? ಎಂದರೆ, ಕಣ್ಠದಲ್ಲಿ ರುದ್ರಾಕ್ಷವಂ ಧರಿಸಿ ಮೃತಿಯನ್ನು ಹೊಂದಿದ ನಾಯಿಯು ರುದ್ರತ್ವವಂ ಪಡೆಯುವಲ್ಲಿ; ಮನುಷ್ಯಾದಿಗಳಿಗೆ ರುದ್ರತ್ವವುಂಟಾಗುವುದು ಆಶ್ಚರ್ಯವಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಕಣ್ಠೇ ರುದ್ರಾಕ್ಷಮಾಶ್ರಿತ್ಯ ಶುನಕೋ ಮ್ರಿಯತೇ ಯದಿ ||
ಸೋಽಪಿ ರುದ್ರತ್ವಮಾಪ್ನೋತಿ ಕಿಮ್ಪುನರ್ಮಾನುಷಾದಯಃ "

ಮತ್ತಂ, ಸರ್ವಾಙ್ಗಕ್ಕೂ ಭಸ್ಮೋದ್ಧೂಳನವಂ ಮಾಡಿಕೊಂಡು, ರುದ್ರಾಕ್ಷಗಳಂ ಧರಿಸಿದ ಜನರು—ಮಹಾತ್ಮರಾಗಿ, ಭೂರುದ್ರರೆಂದೆನಿಸಿಕೊಳ್ಳುವರೆಂಬೀವಿಷಯದಲ್ಲಿ ಸನ್ದೇಹವಿಲ್ಲವೆಂಬಲ್ಲಿ ಸಾಕ್ಷಿಯು.—

" ಭಸ್ಮೋದ್ಧೂಳಿತಸರ್ವಾಙ್ಗಾ ಧೃತರುದ್ರಾಕ್ಷಮಾಲಿಕಾಃ ||
ಯೇ ಭವನ್ತಿ ಮಹಾತ್ಮಾನಸ್ತೇ ರುದ್ರಾ ನಾತ್ರಸಂಶಯಃ "

ಭಸ್ಮರುದ್ರಾಕ್ಷಗಳನ್ನು ಧರಿಸಿಕೊಳ್ಳದ ದ್ವಿಜನಿಂದ ಮಾಡಲ್ಪಡತಕ್ಕ ನಿತ್ಯ ನೈಮಿತ್ತಿಕ ಕಾಮ್ಯಕರ್ಮಂಗಳು ವ್ಯರ್ಥವಾಗುವವೋ ? ಎಂದರೆ, ನಿತ್ಯ ನೈಮಿತ್ತಿಕ ಕಾಮ್ಯಕರ್ಮಂಗಳನ್ನು ಯಾವಾಗಲೂ ಮಾಡುತ್ತಿರುವ ದ್ವಿಜನು—ಭಸ್ಮರುದ್ರಾಕ್ಷಗಳಂ ಧರಿಸಿಕೊಳ್ಳದಿರ್ದೊಡೆ, ಅವನಿಗೆ ಆ ಕರ್ಮಫಲವುಂಟಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ನಿತ್ಯಾನಿ ಕಾಮ್ಯಾನಿ ನಿಮಿತ್ತಜಾನಿ
ಕರ್ಮಾಣಿ ಸರ್ವಾಣಿ ಸದಾಽಪಿ ಕುರ್ವನ್ ||
ಅಭಸ್ಮರುದ್ರಾಕ್ಷಧರೋ ಯದಿ ಸ್ಯಾತ್
ದ್ವಿಜೋ ನ ತಸ್ಯಾಸ್ತಿ ಫಲೋಪಪತ್ತಿಃ "

ಮತ್ತಂ, ಅಜ್ಞಾನದಿಂದ ರುದ್ರಾಕ್ಷಗಳಂ ಧರಿಸದೆ ವೈದಿಕಕರ್ಮಗಳನ್ನಾಚರಿಸತಕ್ಕ ವಿಪ್ರನು—ಆ ಕರ್ಮಗಳಿಂದುಂಟಾಗಬೇಕಾದ ಫಲಗಳನ್ನು ಹೊಂದತಕ್ಕವನಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಅರುದ್ರಾಕ್ಷಧರೋ ಭೂತ್ವಾ ಯತ್ಕಿಞ್ಚಿತ್ಕರ್ಮ ವೈದಿಕಮ್ ||
ಕುರ್ಯಾದ್ವಿಪ್ರಸ್ತು ಯೋ ಮೋಹಾತ್ಸ ತು ನಾಪ್ನೋತಿ ತತ್ಫಲಮ್ "

ಮತ್ತಂ, ಶ್ರುತಿ ಸ್ಮೃತಿಗಳಿಂದ ಪ್ರೇರಿತವಾದ ಭಸ್ಮರುದ್ರಾಕ್ಷಗಳಂ ಧರಿಸಿದ ಪುರುಷನು—ವರ್ಣಾಶ್ರಮಾಚಾರನಿರತರೂ, ಯಾವಾಗಲೂ ಸದಾಚಾರಸಮ್ಪನ್ನರೂ ಆದ ಸತ್ಪುರುಷರಲ್ಲಿ ಪೂಜ್ಯನು. ಎಂಬಲ್ಲಿ ಸಾಕ್ಷಿಯು.—

" ಸರ್ವೇಷು ವರ್ಣಾಶ್ರಮಸಙ್ಗತೇಷು
ನಿತ್ಯಂ ಸದಾಚಾರಪರಾಯಣೇಷು ||
ಶ್ರುತಿಸ್ಮೃತಿಭ್ಯಾಮಿಹ ಚೋದ್ಯಮಾನ
ವಿಭೂತಿರುದ್ರಾಕ್ಷಧರಸ್ಸುಪೂಜ್ಯಃ "

ಇತಿ ಶ್ರೀಮತ್ಪರಶಿವ ಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾ ನವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ ಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವಸಾ ಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾ ರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್ ಅಷ್ಟಾವರಣಪ್ರಕರಣದಲ್ಲಿ ರುದ್ರಾಕ್ಷಸ್ಥಲ ನಿರೂಪಣಮ್.



|| ಶ್ರೀಃ ||

ರುದ್ರಾಯ ಪರಮಾತ್ಮನೇನಮಃ.

## ಮನ್ತ್ರಸ್ಥಲಮ್.

ಮಙ್ಗಳಕರವಾದ ಭಸ್ಮರುದ್ರಾಕ್ಷಧಾರಣದಿಂ ಪರಿಶುದ್ಧನಾದ, ಲಿಙ್ಗಧಾರಿ ಯಾದ, ಶಿವಭಕ್ತನು—ಪರಬ್ರಹ್ಮವಾದ, ಶಿವತತ್ವಸ್ವರೂಪವನ್ನು ತೋರ್ಪಡಿಸತಕ್ಕ ಪಞ್ಚಾಕ್ಷರೀ ವಿದ್ಯೆಯನ್ನು ಮಾನಸೋಪಾಂಶುವಾಚಿಕರೂಪದಿಂ ಜಪಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಧೃತಶ್ರೀಭೂತಿರುದ್ರಾಕ್ಷಪ್ರಯತೋ ಲಿಙ್ಗಧಾರಕಃ ||
ಜಪೇತ್ಪಞ್ಚಾಕ್ಷರೀಂ ವಿದ್ಯಾಂ ಶಿವತತ್ವಪ್ರಬೋಧಿನೀಮ್ "

ಈ ಪಞ್ಚಾಕ್ಷರ ಮನ್ತ್ರವನ್ನೇ ಯಾವ ಕಾರಣದಿಂ ಜಪಿಸಬೇಕೆಂದರೆ "ಶಿವ ಏಕೋ ಧ್ಯೇಯಶ್ಶಿವಙ್ಕರಸ್ಸರ್ವಮನ್ಯತ್ಪರಿತ್ಯಜ್ಯ" ಇತ್ಯಾದಿ ಶ್ರುತಿವಚನಗಳಿಂದುವುದ ರಿಂದ ಶಿವತತ್ವಕ್ಕಿಂತ ಶ್ರೇಷ್ಠವಹ ತತ್ವವು ಇಲ್ಲದಿರುವಂತೆ, ಪಞ್ಚಾಕ್ಷರ ಮನ್ತ್ರ ಕ್ಕಿಂತ ಶ್ರೇಷ್ಠವಾದ ಮನ್ತ್ರವಿಲ್ಲವು, ಎಂಬಲ್ಲಿ ಸಾಕ್ಷಿಯು.—

" ಶಿವತತ್ವಾತ್ಪರಂ ನಾಸ್ತಿ ಯಥಾ ತತ್ವಾನ್ತರಂ ಮಹತ್ ||
ತಥಾ ಪಞ್ಚಾಕ್ಷರೀಮನ್ತ್ರಾನ್ನಾಸ್ತಿ ಮನ್ತ್ರಾನ್ತರಂ ಮಹತ್ "

“ ವಿದ್ಯಾಸು ಶ್ರುತಿರುತ್ಕೃಷ್ಟಾ ತತ್ರೈಕಾದಶಿನೀ ಶ್ರುತೌ|| ತಸ್ಯಾಂ ಪಞ್ಚಾಕ್ಷರೀ ತತ್ರ ಶಿವ ಇತ್ಯಕ್ಷರದ್ವಯಮ್ ” ಎಂದು ಪುರಾಣವಚನವಿರುವುದರಿಂದ ‘ ಶಿವ ’ ಎಂಬಕ್ಷರದ್ವಯವು—ಋಕ್ಸಾಮವೇದ ಸಙ್ಗ್ರಹರೂಪಮಾದ ಅಕಾರದಿಂದಲೂ, ಯಜುರ್ವೇದಸಂಗ್ರಹರೂಪಮಾದ ಇಕಾರದಿಂದಲೂ ಅಥರ್ವಣವೇದಸಙ್ಗ್ರಹರೂಪಮಾದ ಶಕಾರದಿಂದಲೂ, ವೇದಾಙ್ಗಸಙ್ಗ್ರಹರೂಪಮಾದ ವಕಾರದಿಂದಲೂ ಶೋಭಿಸುತ್ತಿರುವುದರಿಂದ ವೇದಸಾರಮಾಗಿರುತ್ತದೆ. ಅಂತಹ ‘ ಶಿವ ’ ನಾಮದಿಂ ಕೂಡಿರುವುದರಿಂದ ಪಞ್ಚಾಕ್ಷರ ಮನ್ತ್ರವೇ ಸರ್ವಮನ್ತ್ರ ಶ್ರೇಷ್ಠವಾಗಿರುತ್ತದೆ.

ಶಿವನು—ಪಞ್ಚಾಕ್ಷರ ಮನ್ತ್ರದಿಂದಲೇ ತಿಳಿಯಲು ಯೋಗ್ಯನಾಗಿರುವುದಿಂದ, ಅನ್ಯಮನ್ತ್ರಗಳಿಂದ ಪ್ರಯೋಜನವಿಲ್ಲವೆಂಬಲ್ಲಿಯೂ, “ ಸರ್ವಮಿದಂ ಬ್ರಹ್ಮವಿಷ್ಣುರುದ್ರೇನ್ದ್ರಾಸ್ತೇ ಸಮ್ಪ್ರಸೂಯನ್ತೇ ” ಎಂದು ಶ್ರುತಿವಚನವಿರುವುದರಿಂದ ಶಿವನು ಸಕಲ ಜಗತ್ತಿಗೆ ಮೂಲಕಾರಣನೆಂದು ತಿಳಿಯಲ್ಪಡಲಾಗಿ, ಶಿವೇತರದೇವತೆಗಳಿಂದ ಪ್ರಯೋಜನವಿಲ್ಲವೆಂಬಲ್ಲಿಯೂ ಸಾಕ್ಷಿಯು.—

“ ಜ್ಞಾತೇ ಪಞ್ಚಾಕ್ಷರೀ ಮನ್ತ್ರೇ ಕಿಂವಾ ಮನ್ತ್ರಾನ್ತರೈಃ ಫಲಂ ||
ಜ್ಞಾತೇ ಶಿವೇ ಜಗನ್ಮೂಲೇ ಕಿಂಫಲಂ ದೇವತಾನ್ತರೈಃ ”

ಮತ್ತಂ, “ ಸರ್ವಮನ್ಯತ್ಪರಿತ್ಯಜ್ಯ ಹೇಯಾನ್ವಿಷ್ಣ್ವಾದಿಕಾನ್ಸುರಾನ್ || ಶಿವ ಏವ ಸದಾಧ್ಯೇಯಸ್ಸರ್ವ ಸಂಸಾರ ನಾಶಕಃ ” ಎಂದು ಪೈಪ್ಪಲಾದ ಶ್ರುತಿವಚನವಿರುವುದರಿಂದಲೂ, “ ಅಜಾತ ಇತ್ಯೇವ ಕಶ್ಚಿದ್ಭೀರುಃ ಪ್ರಪದ್ಯತೇ ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಮ್ ” ಎಂದು ಶ್ವೇತಾಶ್ವತರ ಶ್ರುತಿವಚನ ವಿರುವುದರಿಂದಲೂ ಅಜಾತನೂ, ಮುಮುಕ್ಷೂಪಾಸ್ಯನೂ ಆದ ಶಿವನು ಬ್ರಹ್ಮವಿಷ್ಣ್ವಾದಿ ದೇವತೆಗಳಲ್ಲಿ ಶ್ರೇಷ್ಠನಾಗಿರುವಂತೆ, ವೇದಾಗಮಸಾರವಾದ ಪಂಚಾಕ್ಷರ ಮನ್ತ್ರವು—ಸಪ್ತಕೋಟಿ ಮಹಾಮನ್ತ್ರಗಳಲ್ಲಿ ಶ್ರೇಷ್ಠವಾಗಿರುತ್ತದೆ, ಎಂಬಲ್ಲಿ ಸಾಕ್ಷಿಯು.—

“ ಸಪ್ತಕೋಟಿಷು ಮನ್ತ್ರೇಷು ಮನ್ತ್ರಃ ಪಞ್ಚಾಕ್ಷರೋ ಮಹಾನ್ ||
ಬ್ರಹ್ಮವಿಷ್ಣ್ವಾದಿದೇವೇಷು ಯಥಾ ಶಮ್ಭುರ್ಮಹತ್ತರಃ ”

ಶಿವನು—ಬ್ರಹ್ಮವಿಷ್ಣ್ವಾದಿ ಜಗತ್ತಿಗೆ ಕಾರಣನಾದುದರಿಂದ ಸರ್ವಶ್ರೇಷ್ಠನಾಗಿದ್ದಾಗ್ಯೂ, ಪಞ್ಚಾಕ್ಷರ ಮನ್ತ್ರವು ಎಂತು ಸರ್ವೋತ್ಕೃಷ್ಟವೆಂದರೆ—ಪರಮಾತ್ಮನಾದ ಶಿವನು ಸಕಲ ವಿಶ್ವಕ್ಕೂ ಕಾರಣನಾಗಿರುವಂತೆ, ಆ ಶಿವನನ್ನು ಹೇಳುವ ಪಞ್ಚಾಕ್ಷರ ಮನ್ತ್ರವು ಸಕಲ ಮನ್ತ್ರಕ್ಕೂ ಕಾರಣವಾದದ್ದು, ಎಂಬಲ್ಲಿ ಸಾಕ್ಷಿಯು.—

" ಅಶೇಷಜಗತಾಂ ಹೇತುಃ ಪರಮಾತ್ಮಾ ಮಹೇಶ್ವರಃ ||
ತಸ್ಯ ವಾಚಕಮನ್ತ್ರೋಽಯಂ ಸರ್ವಮನ್ತ್ರೈಕ ಕಾರಣಮ್ "

ಅದು ಹ್ಯಾಗೆಂದೊಡೆ:—ಈ ಮನ್ತ್ರವು—ಪ್ರಪಞ್ಚಾತ್ಮಕನಾದ ಶಿವನನ್ನು ಪ್ರತಿಪಾದಿಸತಕ್ಕುದಾಗಿದೆ. ಈ ಮನ್ತ್ರದಿಂ ಪರಶಿವನು ಪ್ರತಿಪಾದ್ಯನಾಗಿದ್ದಾನೆ. ಈ ಮನ್ತ್ರದಿಂದಲೇ ಅವಾಙ್ಮಾನಸಗೋಚರವಾದ ಪರಮೇಶ್ವರನ ಸ್ವರೂಪವು ಪ್ರಕಾಶಿಸಲ್ಪಡುತ್ತದೆ. ಸರ್ವಮನ್ತ್ರಗಳಿಗೂ ಯಜನೀಯ ದೇವತಾಪ್ರಕಾಶಕತ್ವವು ಸ್ವಭಾವಸಿದ್ಧವಾಗಿಯೇ ಇರ್ರುವದಾಗಿ, ಈ ಮನ್ತ್ರವಿಲ್ಲದಿರ್ದೊಡೆ, ಆ ಪರಮೇಶ್ವರನ ಸ್ಫೂರ್ತಿಯೇ ಇಲ್ಲದೆ ಪೋಪುದು. ಆದ್ದರಿಂದ ಸಕಲ ತತ್ತ್ವೋಪಾದಾನ ಕಾರಣನೂ ಸರ್ವಾತ್ಮಕನೂ ಆದ ಪರಮಾತ್ಮನನ್ನು ಪ್ರತಿಪಾದಿಸುವ ಈ ಮನ್ತ್ರಕ್ಕೆ ತದ್ವಾಚಕಮಾದ ಪಞ್ಚಾಶದ್ವರ್ಣಮಯತ್ವವು ಯುಕ್ತವೆಂದೂ, ಶಿವನು ಸಕಲ ತತ್ವಗಳಿಗೂ ಮೂಲಕಾರಣ ಮಾದಂತೆ, ತತ್ಪ್ರತಿಪಾದಕಮಾದ ಈ ಮನ್ತ್ರವು ಸಕಲಮನ್ತ್ರಗಳಿಗೂ ಮೂಲಕಾರಣಮಾದುದೆಂದೂ "ಅಥಾದ್ಯಾಸ್ತಿಥಯಸ್ಸರ್ವೇ ಸರ್ವಾ ಬಿನ್ದ್ವವಸಾನಕಾಃ|| ತದನ್ತಃ ಕಾಲಯೋಗೇನ ಸೋಮಸೂರ್ಯೌ ಪ್ರಕೀರ್ತಿತೌ || ಪೃಥಿವ್ಯಾದೀನಿ ತತ್ವಾನಿ ಪುರುಷಾನ್ತಾನಿ ಪಞ್ಚಸು || ಕ್ರಮಾತ್ಕಾದಿಷು ವರ್ಗೇಷು ಮಕಾರಾನ್ತೇಷು ಸುವ್ರತೇ || ವಾಯ್ವಗ್ನಿಸಲಿಲೇನ್ದ್ರಾಣಾಂ ಧಾರಣಾನಾಂ ಚತುಷ್ಟಯಮ್ || ತದೂರ್ಧ್ವಂ ಶಾದಿ ವಿಖ್ಯಾತಂ ಪುರಸ್ತಾದ್ಬ್ರಹ್ಮಪಞ್ಚಕಮ್|| ಅಮೂಲಾತ್ತತ್ಕ್ರಮಾಜ್ಜ್ಞೇಯಾ ಕ್ಷಾನ್ತಾ ಸೃಷ್ಟಿರುದಾಹೃತಾ || ಸರ್ವೇಷಾಞ್ಚೈವ ಮನ್ತ್ರಾಣಾಂ ವಿದ್ಯಾನಾಞ್ಚ ಯಶಸ್ವಿನೀ || ಇಯಂ ಯೋನಿಸ್ಸಮಾಖ್ಯಾತಾ ಸರ್ವತನ್ತ್ರೇಷು ಸರ್ವದಾ " ಎಂಬ ಆಗಮವಚನಗಳು ಹೇಳುತ್ತವೆ. ಮತ್ತಂ ಶಿವಶಬ್ದದಲ್ಲಿರುವ ಶಕಾರವು ಪಞ್ಚಬ್ರಹ್ಮ ವಾಚಕವಾದದ್ದು. ವಕಾರವು ಮಾಯಾತತ್ವವಾಚಕವಾದದ್ದು. ಆ ಮಾಯಾತತ್ವದಲ್ಲಿ ಸ್ವಕಾರ್ಯ ರೂಪಮಾದ ಕಲಾದಿ ಕ್ಷಿತ್ಯನ್ತವಾದ ತ್ರಿಂಶತ್ತತ್ವಗಳೂ ಅನ್ತರ್ಭೂತವಾದುದರಿಂ ಶಕಾರ ವಕಾರಂಗಳೆರಡೂ ಷಟ್ತ್ರಿಂಶತ್ತತ್ವಗಳಿಗೆ ವಾಚಕಗಳಾದವು. ಶಕಾರ ವರ್ತಿಯಾದ ಅಕಾರವಾದರೋ ಶಿವತತ್ವಕಲಾರೂಪ ಷೋಡಶಸ್ವರಾತ್ಮಕವಾದದ್ದು. ಶಕಾರೋತ್ತರ ವರ್ತಿಯಾದ ಇಕಾರವು ಇಚ್ಛಾಶಕ್ತಿವಾಚಕವಾದದ್ದು. ಸಮಸ್ತಶಬ್ದಮಯಪ್ರಪಂಚವನ್ನೂ ಅದಕ್ಕುಪಾದಾನ ಕಾರಣ ಭೂತಮಾದ ಪಞ್ಚಾಶದ್ವರ್ಣಮಯ ಮಾತೃಕಾಸ್ವರೂಪವನ್ನೂ ಷಟ್ತ್ರಿಂಶತ್ತತ್ವಮಯವಾದ ಸಮಸ್ತಾರ್ಥಮಯ ಪ್ರಪಞ್ಚವನ್ನೂ ತನ್ನಲ್ಲಡಗಿಸಿಕೊಂಡಿರುವ ಈ ಶಿವಶಬ್ದವೇ ಸಮಸ್ತ ಮನ್ತ್ರಗಳಿಗೆ ಮೂಲಕಾರಣವೆಂದು ತಿಳಿಯತಕ್ಕದ್ದು. ಇದು ಮಾತೃಕಾಶಬ್ದಮಯ ಪ್ರಪಞ್ಚಕ್ಕೂ ಮೂ

 

ಲಕಾರಣಮೆಂಬಂಶವು " ಪಞ್ಚಾಶನ್ನಿಜದೇಹಜಾಕ್ಷರಭವೈರ್ನಾನಾ ವಿಧೈರ್ಧಾತುಭಿ ರ್ಬಹ್ವರ್ಥೈಃ ಪದವಾಕ್ಯಮಾನಜನಕೈರರ್ಥಾವಿನಾಭಾವಿತೈಃ || ಸಾಭಿಪ್ರಾಯ ಸದ ರ್ಥಕರ್ಮಫಲದಾನನ್ದೈರನನ್ತೈರಿದಂ ವಿಶ್ವಂ ವ್ಯಾಪ್ಯ ಚಿದಾತ್ಮನಾಹಮಹಮಿತ್ಯು ಜ್ಜೃಂಭಸೇ ಮಾತೃಕೇ || ಪಞ್ಚಾಶದ್ವರ್ಣಮಾಲಾ ಬಹುವಿಧನಿನದೋಚ್ಚಾರಣಾ ತ್ವಜಾಲವ್ಯಕ್ತಿವ್ಯಾಪಾರ ಸತ್ತಾಗಿರಿಶಗುರುಮುಖಾಮ್ನಾಯ ವಿದ್ಯಾ ಸ್ವರೂಪಾ || ಧಾತ್ವಾದ್ಯುತ್ಪತ್ತಿಪೂರ್ವಂ ಶ್ರುತಿ ಮುಖವಿವಿಧಾನೇಕ ಸಿದ್ಧಾನ್ತ ವಿದ್ಯಾ ನಾನಾಭಾ ಷಾಃ ಕ್ರಿಯಾಭಿಃ ಪ್ರಕಟಯತಿ ಯತಸ್ಸೈವ ತೇ ಸಾಙ್ಗವೇದಃ '' ಎಂಬ ದೂರ್ವಾಸ ಪೂಜ್ಯಪಾದರ ಉಕ್ತಿಯಿಂದ ಸ್ಪಷ್ಟವಾಗಿರುತ್ತದೆ.

ಈ ಮನ್ತ್ರಕ್ಕೆ ಅಕ್ಷರದ್ವಯವೇ ಉಚಿತವಲ್ಲದೆ ಪಞ್ಚಾಕ್ಷರಾತ್ಮಕತ್ವವು ಉಚಿ ತವಲ್ಲವು ಎಂದರೆ—'ನಮಃ' ಎಂಬ ಪದವು ಜೀವವಾಚಕವಾದದ್ದು, ಜೀವನೆಂ ದರೆ ಅಙ್ಗನೆಂದರ್ಥವು. 'ಶಿವಃ' ಎಂಬ ಪದವು ಪರಮಾತ್ಮವಾಚಕವಾದದ್ದು, ಪ ರಮಾತ್ಮನೆಂದರೆ ಲಿಙ್ಗವೆಂದರ್ಥವು. 'ಆಯ' ಎಂಬುದು ಅಯ+ಗತೌ ಎಂದು ಧಾತುವಿರುವುದರಿಂದ ಐಕ್ಯವಾಚಕವಾದದ್ದು. ಈ ಪ್ರಕಾರವಾಗಿ ಪಂಚಾಕ್ಷರ ಮ ನ್ತ್ರವು ಲಿಙ್ಗಾಙ್ಗಸಾಮರಸ್ಯಬೋಧನಾರ್ಥವಾಗಿ ಪಂಚಾಕ್ಷರ ವಿಶಿಷ್ಟವಾಗಿ ಪ್ರಯೋ ಗಿಸಲ್ಪಟ್ಟಿರುವುದೆಂದು " ನಮಃ ಪದಂ ತತ್ವಲು ಜೀವವಾಚಿ ಶಿವಃ ಪದಂ ತತ್ಪರ ಮಾತ್ಮವಾಚಿ || ಅಯೇತಿ ತಾದಾತ್ಮ್ಯಪಖಂ ತದೇತನ್ನಮಶ್ಶಿವಾಯೇತಿ ಜಗಾದ ಮ ನ್ತ್ರಮ್ '' ಎಂಬ ವಚನವು ಹೇಳುವುದರಿಂದ, ನಮಶ್ಶಬ್ದವಂ ಪ್ರಥಮದಲ್ಲುಚ್ಚರಿಸಿ ಅನನ್ತರದಲ್ಲಿ ಶಿವಾಯ ಎಂದುಚ್ಚರಿಸಬೇಕು. ಈ ಪ್ರಕಾರದಿಂದೀ ಪಞ್ಚಾಕ್ಷರೀ ಮ ನ್ತ್ರವು ಸಕಲ ಶ್ರುತಿಮಸ್ತಕದಲ್ಲಿಯೂ ಪ್ರಕಾಶಿಸುತ್ತಿಹುದು. ಎಂಬಲ್ಲಿ ಸಾಕ್ಷಿಯು.—

" ನಮಶ್ಶಬ್ದಂ ವದೇತ್ಪೂರ್ವಂ ಶಿವಾಯೇತಿ ತತಃ ಪರಮ್ ||
ಮನ್ತ್ರಃ ಪಞ್ಚಾಕ್ಷರೋಹ್ಯೇಷ ಸರ್ವಶ್ರುತಿಶಿರೋಗತಃ "

ಪರಬ್ರಹ್ಮಕ್ಕೆ ಶಿವನೆಂಬಪೆಸರೆಂತು ಬಂದಿತೆಂದರೆ,—ಸಚ್ಚಿದಾನನ್ದ ಘನ ಯೂ, ಸ್ವತನ್ತ್ರನೂ, ಸುಖಭೋಕ್ತೃವೂ, ಸುಖಪ್ರದನೂ ಆದ ಪರಮಾತ್ಮನು ಯಾವ ಕಾಲದಲ್ಲಿಯೂ ಆಣವಾದಿಮಲತ್ರಯಸಮ್ಬನ್ಧವಿಲ್ಲದವನಾದುದರಿಂದ ನಿ ಲನಾಗಿರುವುದರಿಂದಲೂ, ವಶ+ಕಾನ್ತೌ ಎಂಬ ಧಾತುಗತಿಯಿಂ ಸ್ವೇಚ್ಛಪ್ರಕಾ ರೂಪನಾದುದರಿಂದಲೂ ಶಿವನೆಂದು ಪೇಳಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಅದಿತಃ ಪರಿಶುದ್ಧತ್ವಾನ್ಮಲತ್ರಯವಿಯೋಗತಃ ||
ಶಿವ ಇತ್ಯುಚ್ಯತೇ ಶಮ್ಭುಸ್ಸಚ್ಚಿದಾನನ್ದಘನಸಃ ಪ್ರಭುಃ "

ಬ್ರಹ್ಮಾದಿ ದೇವತೆಗಳಿಗೆ ದೇವನೂ, ಸೃಷ್ಟ್ಯಾದಿಗಳಿಗೆ ಕಾರಣವಾದ ನೇತ್ರತ್ರಯವುಳ್ಳವನೂ ಆದ ಪರಮೇಶ್ವರನು—ಸಮಸ್ತಮಙ್ಗಳಗಳಿಗಾವಾಸಭೂಮಿಯುವುದರಿಂ ಶಿವ ಶಬ್ದದಿಂದ ಹೇಳಲು ಯೋಗ್ಯನಾಗಿರುತ್ತಾನೆ. ಎಂಬಲ್ಲಿ ಸಾಕ್ಷಿಯು-

"ಆಸ್ಪದತ್ವಾದಶೇಷಾಣಾಂ ಮಙ್ಗಳಾನಾಂ ವಿಶೇಷತಃ ||
ಶಿವಶಬ್ದಾಭಿಧೇಯೋ ಹಿ ದೇವದೇವಸ್ತ್ರಿಯಮ್ಬಕಃ"

ಪರಬ್ರಹ್ಮವಾಚಕವಾದ ನಾಮಗಳು ಅನೇಕವಾಗಿರುತ್ತಿದ್ದರೂ, ಪರಬ್ರಹ್ಮವು—ಶಿವಶಬ್ದದಿಂದಲೇ ಯಾವಕಾರಣದಿಂ ಹೇಳಿಸಿಕೊಳ್ಳುತ್ತಿರುವುದೆಂದರೆ,— ಶಿವ ಎಂಬ ಅಕ್ಷರದ್ವಯವು ಮುಖ್ಯವೃತ್ತಿಯಿಂದ ಪರಬ್ರಹ್ಮಪ್ರಕಾಶಕವಾದದ್ದು. ಆ ಶಿವಶಬ್ದವೇ ಸ್ವವ್ಯತಿರಿಕ್ತವಾದ ಭವ ಮೊದಲಾದ ಶಬ್ದಗಳಿಗೆ 'ಸಿಹ್ಮೋ ಮಾಣವಕಃ' ಎಂಬಂತೆ ಗುಣಯೋಗದಿಂ ಪರಬ್ರಹ್ಮ ಪ್ರಕಾಶಕತ್ವವನುಂಟುಮಾಡತಕ್ಕುದಾಗಿರತಕ್ಕದ್ದು. ಎಂಬಲ್ಲಿ ಸಾಕ್ಷಿಯು.—

"ಶಿವ ಇತ್ಯಕ್ಷರದ್ವನ್ದ್ವಂ ಪರಬ್ರಹ್ಮಪ್ರಕಾಶಕಮ್ ||
ಮುಖ್ಯವೃತ್ತ್ಯಾ ತದನ್ಯೇಷಾಂ ಶಬ್ದಾನಾಂ ಗೌಣವೃತ್ತಯಃ"

ಆ ಕಾರಣದಿಂದ 'ಶಿವ' ಎಂಬೆರಡಕ್ಷರವು—ಸಚ್ಚಿದಾನನ್ದಸ್ವರೂಪನೂ, ಅಪರಿಮಿತಪ್ರಕಾಶರೂಪನೂ ಆದ ಪರಮಾತ್ಮನಿಗೆ ಮುಖ್ಯವಾದ ನಾಮವಾಗಿರುತ್ತದೆ. ಪಂಚಾಕ್ಷರಮನ್ತ್ರವು—ಈ 'ಶಿವ' ಎಂಬಕ್ಷರದ್ವಯವನ್ನಾಶ್ರೈಸಿದ ಕಾರಣದಿಂ ಶ್ರೇಷ್ಠವೆಂದೆನಿಸಿಕೊಂಡಿತು. ಎಂಬಲ್ಲಿ ಸಾಕ್ಷಿಯು.—

"ತಸ್ಮಾನ್ಮುಖ್ಯತರಂ ನಾಮ ಶಿವ ಇತ್ಯಕ್ಷರದ್ವಯಮ್ ||
ಸಚ್ಚಿದಾನನ್ದರೂಪಸ್ಯ ಶಮ್ಭೋರಮಿತತೇಜಸಃ ||
ಏತನ್ನಾಮಾವಲಮ್ಬೇನ ಮನ್ತ್ರಃ ಪಞ್ಚಾಕ್ಷರಸ್ಸ್ಮೃತಃ"

ಈ ಮನ್ತ್ರದಿಂದೇನುಮಾಡಬೇಕು ? ಫಲವೇನು ? ಎಂದರೆ. —ಯಾವಕಾರಣದಿಂ ಶಿವನಾಮಯುಕ್ತಮಾದ ಪಞ್ಚಾಕ್ಷರಮನ್ತ್ರವು—ಅಧಿಕವಾದದ್ದೋ, ಆ ಕಾರಣದಿಂ ಮುಮುಕ್ಷುಗಳಿಂದ ನಂಬುಗೆಯಿಂದ ಯಾವಾಗಲೂ ಜಪಿಸಲು ಯೋಗ್ಯವಾದದ್ದು ಎಂಬಲ್ಲಿಯೂ, ಅನಾದಿಯಾದ ಪರಶಿವನು—"ಶಿವ ಏವ ಸದಾಧ್ಯೇಯಸ್ಸರ್ವಸಂಸಾರನಾಶಕಃ" ಎಂದು ಶ್ರುತಿಯಿರುವುದರಿಂದ ಜೀವರನ್ನು ಸಂಸಾರದಿಂದ ಬಿಡಿಸತಕ್ಕವನೆಂದು ಪ್ರಸಿದ್ಧನಾಗಿರುವಂತೆ, ಪಞ್ಚಾಕ್ಷರಮನ್ತ್ರವು—"ಅಶೇಷಪಾಪವಿಚ್ಛಿತ್ತ್ಯೈ ಶಿವ ಇತ್ಯಕ್ಷರದ್ವಯಮ್ || ಅಲಂ ನಮಸ್ಕ್ರಿಯಾಯುಕ್ತೋ ಮುಕ್ತಯೇ ಕಲ್ಪಿತೋ ಮನುಃ" ಎಂಬ ಬ್ರಹ್ಮೋತ್ತರಖಣ್ಡಸ್ಥ ವಚನವಿರುವುದ

ರಿಂದಲೂ, ಸಂಸಾರನಾಶಕವಾದದ್ದೆಂದು ಪ್ರಸಿದ್ಧವಾಗಿರುತ್ತದೆ. ಎಂಬಲ್ಲಿಯೂ ಸಾಕ್ಷಿಯು.—

" ಯಸ್ಮಾತ್ತತಸ್ಸದಾಜಪ್ಯೋ ಮೋಕ್ಷಕಾಂಕ್ಷಿಭಿರಾದರಾತ್ ||
ಯಥಾsನಾದಿರ್ಮಹಾದೇವಸ್ಸಿದ್ಧಸ್ಸಂಸಾರಮೋಚಕಃ ||
ತಥಾ ಪಞ್ಚಾಕ್ಷರೋ ಮನ್ತ್ರಸ್ಸಂಸಾರಕ್ಷಯಕಾರಕಃ "

ಸಂಸಾರನಾಶಕವಾದ ಈ ಮನ್ತ್ರವು—ಶಿವನಂತೆ ವಿಶ್ವಕಾರಣವೂ ಆಗಿರುತ್ತದೆಯೇ? ಎಂದರೆ, ಪೃಥಿವ್ಯಾದಿ ಪಞ್ಚಭೂತಂಗಳೂ, ಗನ್ಧಾದಿ ಪಞ್ಚತನ್ಮಾತ್ರಗಳೂ, ಜ್ಞಾನಶಕ್ತಿಮಯವಾದ ಘ್ರಾಣಾದಿ ಪಞ್ಚಜ್ಞಾನೇನ್ದ್ರಿಯಗಳೂ, ಕ್ರಿಯಾಶಕ್ತಿಸ್ವರೂಪವಾದ ಉಪಸ್ಥಾದಿ ಪಞ್ಚಕರ್ಮೇನ್ದ್ರಿಯಗಳೂ, ಪಞ್ಚಸಾದಾಖ್ಯ ಪಞ್ಚಬ್ರಹ್ಮಗಳೆಂಬ ಪರ್ಯಾಯನಾಮಗಳುಳ್ಳ ಆಚಾರಾದಿ ಪಞ್ಚಲಿಙ್ಗಗಳೂ, ಭವಮೃಡ ಹರಾದಿಕಾರಣೇಶ್ವರರೊಡನೆ ಸೃಷ್ಟ್ಯಾದಿ ಪಞ್ಚಕೃತ್ಯಂಗಳೂ ಪಞ್ಚಾಕ್ಷರಮನ್ತ್ರದ ಪಞ್ಚವರ್ಣಗಳಿಂದ ತಿಳಿಯಲ್ಪತಕ್ಕವುಗಳಾಗಿರುತ್ತವೆ. ಎಂಬಲ್ಲಿ ಸಾಕ್ಷಿಯು.-

" ಪಞ್ಚಭೂತಾನಿ ಸರ್ವಾಣಿ ಪಞ್ಚತನ್ಮಾತ್ರಕಾನಿ ಚ ||
ಜ್ಞಾನೇನ್ದ್ರಿಯಾಣಿ ಪಞ್ಚಾಪಿ ಪಞ್ಚ ಕರ್ಮೇನ್ದ್ರಿಯಾಣಿ ಚ ||
ಪಞ್ಚಬ್ರಹ್ಮಾಣಿ ಪಞ್ಚಾಪಿ ಕೃತ್ಯಾನಿ ಸಹ ಕಾರಣೈಃ ||
ಬೋಧ್ಯಾನಿ ಪಞ್ಚಭಿರ್ವರ್ಣೈಃ ಪಞ್ಚಾಕ್ಷರಮಹಾಮನೋಃ "

ಪಞ್ಚಶಕ್ತಿ ಪಞ್ಚಾಙ್ಗುಲಿ ವಚನಾದಾನ ಗಮನ ವಿಸರ್ಗಾನನ್ದ ರೂಪಕರ್ಮೇನ್ದ್ರಿಯಾರ್ಥ ಮನೋಬುದ್ಧ್ಯಹಙ್ಕಾರ ಪ್ರಕೃತಿ ಪುರುಷ ಮೊದಲಾಗಿ ಪಞ್ಚಪ್ರಕಾರದಿಂ ವಿಶೇಷಮಾಗಿ ಪ್ರಸಿದ್ಧವಾದವುಗಳೆಲ್ಲವೂ ಸ್ವರ್ಣಕುಣ್ಡಲನ್ಯಾಯದಿಂ ಪಞ್ಚಾಕ್ಷರಕಾರ್ಯಂಗಳಾಗಿ; ಪಞ್ಚಾಕ್ಷರಂಗಳೇ ಆಗಿ, ಇರುತ್ತವೆ ಎಂದು ತಿಳಿಯಲ್ಪತಕ್ಕವು. ವರ್ಣಂಗಳು ಶಕ್ತಿರೂಪಮಾದುದರಿಂ ವಿಶ್ವಮೆಲ್ಲಂ ತತ್ಕಾರ್ಯಮೆಂಬುದು ಪ್ರಸಿದ್ಧವು. ಎಂಬಲ್ಲಿ ಸಾಕ್ಷಿಯು.—

" ಪಞ್ಚಧಾ ಪಞ್ಚಧಾ ಯಾನಿ ಪ್ರಸಿದ್ಧಾನಿ ವಿಶೇಷತಃ ||
ತಾನಿ ಸರ್ವಾಣಿ ವಸ್ತೂನಿ ಪಞ್ಚಾಕ್ಷರಮಯಾನಿ ಹಿ "

ಪಞ್ಚಕೃತ್ಯಾನ್ತರ್ಗತವಾದ ಮೋಕ್ಷವು ಪ್ರಣವಾಭ್ಯಾಸದಿಂ ಸಾಧ್ಯವಾದದ್ದು. ಆ ಪ್ರಣವವು ಈ ಪಞ್ಚಾಕ್ಷರದಲ್ಲಿ ಕಾಣದಿರುವುದರಿಂ ಅದೆಂತು ಘಟಿಪುದೆನೆ ಉಕ್ತಪ್ರಕಾರದಿಂ ಸರ್ವೋತ್ಕೃಷ್ಟಮಾದ ಪಞ್ಚಾಕ್ಷರಮಯವಾದ ಮನ್ತ್ರವು "ನಮಸ್ತಾರಾಯ ಚ ನಮಶ್ಶಮ್ಭವೇ ಚ " ಎಂಬ ಶ್ರೀರುದ್ರಶ್ರುತಿಯಿಂದಲೂ, ಈಶಾನ

ಮನ್ತ್ರದ ಕಡೆಯಲ್ಲಿರುವ " ಮೇ ಅಸ್ತು ಸದಾಶಿವೋಮ್ " ಎಂಬುದರಿಂದಲೂ, " ಓಙ್ಕಾರಾತ್ಮತಯಾಭಾತಿ ಶಾನ್ತ್ಯತೀತಃ ಪರಶ್ಶಿವಃ " ಎಂಬಾಗಮೋಕ್ತಿಯಿಂದ ಲೂ, "ಶಿವೋ ವಾ ಪ್ರಣವಃಪ್ರೋಕ್ತಃ ಪ್ರಣವೋ ವಾ ಶಿವಸ್ಸ್ಮೃತಃ || ವಾಚ್ಯವಾ ಚಕಯೋರ್ಭೇದೋ ನಾತ್ಯನ್ತಂ ಭಿದ್ಯತೇಕ್ವಚಿತ್ " ಎಂಬ ಪುರಾಣೋಕ್ತಿಯಿಂದಲೂ ಶಿವ ಪ್ರಣವಗಳಿಗೆ ಭೇದವಿಲ್ಲದಿರುವುದರಿಂದ—ಓಙ್ಕಾರವೇ ಮೊದಲಲ್ಲುಳ್ಳುದಾಗಿ, ಷಡಕ್ಷರವೆಂದು ಹೇಳಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.—

" ಓಙ್ಕಾರಪೂರ್ವೋ ಮನ್ತ್ರೋಽಯಂ ಪಞ್ಚಾಕ್ಷರಮಯಃ ಪರಃ ||
ಶೈವಾಗಮೇಷು ವೇದೇಷು ಷಡಕ್ಷರ ಇತಿ ಸ್ಮೃತಃ "

" ಪ್ರಥಮಂ ತಾರಕಾರೂಪಂ ದ್ವಿತೀಯಂ ದಣ್ಡ ಉಚ್ಯತೇ || ತೃತೀಯಂ ಕುಣ್ಡಲಾಕಾರಂ ಚತುರ್ಥಂ ಚಾರ್ಧಚನ್ದ್ರಕಮ್ || ಪಞ್ಚಮಂ ದರ್ಪಣಾಕಾರಂ ಷಷ್ಠಂ ಜ್ಯೋತಿಸ್ಸ್ವರೂಪಕಮ್ || ನಕಾರಸ್ತಾರಕಾರೂಪ ಮಕಾರೋ ದಣ್ಡ ಉ ಚ್ಯತೇ || ಶಿಕಾರಃ ಕುಣ್ಡಲಾಕಾರೋ ವಕಾರಶ್ಚಾರ್ಧಚನ್ದ್ರಕಃ || ಯಕಾರೋ ದರ್ಪಣಾಕಾರಃ ಪಞ್ಚವರ್ಣರಾಟ್ " ಎಂದು ಆಗಮವಚನವಿರುವುದರಿಂದ ತಾರ ಕಾಕೃತಿಯಾದ ನಕಾರದಿಂದಲೂ, ದಣ್ಡಕಾಕೃತಿಯಾದ ಮಕಾರದಿಂದಲೂ, ಕು ಣ್ಡಲಾಕೃತಿಯಾದ ಶಿಕಾರದಿಂದಲೂ, ಅರ್ಧಚನ್ದ್ರಾಕೃತಿಯಾದ ವಕಾರದಿಂದಲೂ, ದರ್ಪಣಾಕೃತಿಯಾದ ಯಕಾರದಿಂದಲೂ ಕೂಡಿದ ಶಿವಮನ್ತ್ರವೆಂಬ ಕಲ್ಪವೃಕ್ಷಕ್ಕೆ ಆದಿಯಾದ, " ಯೋ ವೈ ರುದ್ರಸ್ಸ ಭಗವಾನ್ " ಎಂಬಿದು ಮೊದಲಾಗಿ "ಯ ಓ ಙ್ಕಾರಸ್ಸಪ್ರಣವೋ ಯಃ ಪ್ರಣವಸ್ಸ ಸರ್ವವ್ಯಾಪೀ ಯಸ್ಸರ್ವವ್ಯಾಪೀ ಸೋಽನನ್ತೋ ಯೋಽನನ್ತಸ್ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛು ಕ್ಲಂ ತದ್ವೈದ್ಯುತಂ ಯದ್ವೈದ್ಯುತಂ ತತ್ಪರಂ ಬ್ರಹ್ಮ ಸಏಕಸ್ಸ ಏಕೋ ರುದ್ರಸ್ಸ ಈಶಾನಸ್ಸ ಭಗವಾಂತ್ಸ ಮಹೇಶ್ವರಸ್ಸ ಮಹಾದೇವಃ " ಎಂಬುದೇ ಅನ್ತ್ಯವಾ ಗುಳ್ಳ ಅಥರ್ವಶಿರಶ್ಶ್ರುತಿಯಿಂದ ಉಕ್ತವಾದ ಮಹತ್ತ್ವದಿಂ ಕೂಡಿದ ಪ್ರಣವದಿಂದ ಕೇವಲ ಸಚ್ಚಿದಾನನ್ದಾತ್ಮಕನಾದ ಶಿವನು ತಿಳಿಯಲ್ಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.

" ಮನ್ತ್ರನ್ಯಾಸಾದಿಭೂತೇನ ಪ್ರಣವೇನ ಮಹಾಮನೋಃ ||
ಪ್ರಬೋಧ್ಯತೇ ಮಹಾದೇವಃ ಕೇವಲಶ್ಚಿತ್ಸುಖಾತ್ಮಕಃ "

ಶಿವನು–ಪ್ರಣವದಿಂದಲ್ಲದೆ ಮತ್ತಾವುದರಿಂದಲೂ ಪ್ರಕಾಶಿಸುವುದಿಲ್ಲವೋ ? ಎಂದರೆ, " ಶಿವಂ ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗಮವ್ಯಯಮ್ " ಎಂಬಾ ಗಮ ವಚನಪ್ರಮಾಣವಿರುವುದರಿಂದಲೂ, " ಏಕಮೇವಾದ್ವಿತೀಯಮ್ "–" ನೇಹ

ನಾನಾಸ್ತಿ ಕಿಞ್ಚನ'' ಎಂಬ ಶ್ರುತಿಪ್ರಮಾಣಗಳಿರುವುದರಿಂದಲೂ ದ್ವಿತೀಯಶೂನ್ಯವಾಗಿ, ಎರಡಿಲ್ಲದ ಕಾರಣದಿಂ ಪ್ರಪಞ್ಚರಹಿತವೂ, ಸಚ್ಚಿದಾನಂದ ಸ್ವರೂಪವೂ, ಶಿವನೆಂಬ ಪೆಸರುಳ್ಳುದೂ, ಆದ ಪರಬ್ರಹ್ಮವು-ಸತ್ಸ್ವರೂಪವಾದ 'ಅ, ಎಂಬವರ್ಣದಿಂದಲೂ, ಚಿತ್ಸ್ವರೂಪವಾದ 'ಉ, ಎಂಬ ವರ್ಣದಿಂದಲೂ, ಆನನ್ದಸ್ವರೂಪವಾದ 'ಮ, ಎಂಬ ವರ್ಣದಿಂದಲೂ, ಕೂಡಿರುವ 'ಓಮ್', ಎಂಬ ಪ್ರಣವದಿಂದಲೇ ಪ್ರಕಾಶಿಸುತ್ತಿಹುದು. ಮತ್ತಂ ಈ ಪಞ್ಚಾಕ್ಷರಂಗಳೇ-ಆಚಾರ, ಗುರು, ಶಿವ, ಚರ, ಪ್ರಸಾದ ಲಿಙ್ಗಗಳಿಗೆ ಬೀಜಾಕ್ಷರಗಳಾಗಿರುತ್ತವೆ. ಪ್ರಣವವೇ-ಮಹಾಲಿಙ್ಗಬೀಜವಾಗಿರುತ್ತದೆ. ಈ ಪ್ರಕಾರದಿಂದಿರುವ ಪ್ರಣವಸಹಿತ ಪಞ್ಚಾಕ್ಷರವೇ—ಷಟ್ಸ್ಥಲಬೀಜವೆಂಬುದು ರಹಸ್ಯಾರ್ಥವು. ಈ ವಿಷಯದಲ್ಲಿ ಸಾಕ್ಷಿಯು.—

"ಪ್ರಣವೇನೈಕವರ್ಣೇನ ಪರಬ್ರಹ್ಮ ಪ್ರಕಾಶ್ಯತೇ ||
ಅದ್ವಿತೀಯಂ ಪರಾನನ್ದಂ ಶಿವಾಖ್ಯಂ ನಿಷ್ಪ್ರಪಞ್ಚಕಮ್"

ಷಟ್ಸ್ಥಲಯೋಗಕ್ಕೆ ಕಾರಣವಾದ ಪ್ರಣವಕ್ಕೆ ಸಚ್ಚಿದಾನನ್ದರೂಪ ಪರಬ್ರಹ್ಮಪ್ರಕಾಶಕತ್ವಮುಂಟಾದಾಗ್ಯೂ, ನಿಷ್ಪ್ರಪಞ್ಚಬ್ರಹ್ಮಪ್ರತಿಪಾದಕತ್ವ ಮೆಂತಪ್ಪುದೆನೆ,—ಪರಮಾತ್ಮವಾಚಕವಾದ ಮನ್ತ್ರವು ಸೋಹಮ್, ಎಂಬ ಭೂತವರ್ತಮಾನ ಕಾಲಾವಗಾಹಿ ಪ್ರತ್ಯಭಿಜ್ಞಾನರೂಪ ಮಾದದ್ದೆಂದು "ಯೋ ಪುರುಷಸ್ಸೋಽಹಮ್" ಎಂಬ ಶ್ರುತಿಯಿಂದಲೂ, ಗುರೂಕ್ತಿಯಿಂದಲೂ, ಸ್ವಾನುಭವದಿಂದಲೂ ತಿಳಿಯಲು ಯೋಗ್ಯಮಾದುದು. ಆ 'ಸೋಹಮ್' ಎಂಬ ಮನ್ತ್ರವು— ಭೇದಘಟಿತಮಾದುದರಿಂ, ಕೇವಲ ಕುಮ್ಭಕದಿಂದ ಸಕಾರ ಹಕಾರಗಳಿಗೆ ಲೋಪವಾಗಲಾಗಿ, ನಿತ್ಯಮಾದ 'ಓಮ್' ಎಂಬ ಏಕಾಕ್ಷರಮನ್ತ್ರವೇ ಪ್ರಕಾಶಿಸುತ್ತಿಹುದು. ಅಲ್ಲಿ ಸಕಾರವು—ಚನ್ದ್ರಬೀಜಮಪ್ಪುದರಿಂ ವೇದ್ಯಮಯವಾದದ್ದು. ಹಕಾರವು-- ಸೂರ್ಯಬೀಜಮಪ್ಪುದರಿಂ ವೇದನಪ್ರಕಾಶಾತ್ಮಕವೃತ್ತಿಜ್ಞಾನಮಯವಾದದ್ದು. ಅವೆರಡೂ ಲುಪ್ತಮಾಗಲಾಗಿ, ವೇದ್ಯವೇದನಶೂನ್ಯವಾದ ಕೇವಲ ವೇದಕಮಾತ್ರ ಪ್ರಕಾಶಕವಾದುದು ಓಙ್ಕಾರವು ಎಂದು ಹೇಳಲ್ಪಟ್ಟಿತು. ಇದರಿಂದ ಶ್ರುತ್ಯಾಗಮಪ್ರಸಿದ್ಧವಾದ ಶಿವಜೀವೈಕ್ಯಮೆಂಬ ಲಿಙ್ಗಾಙ್ಗಸಾಮರಸ್ಯರೂಪಮಾದ ಪರಮ ಮುಕ್ತಿಯು ಸೂಚಿಸಲ್ಪಟ್ಟಿತು, ಎಂದನುಸನ್ಧಾನಿಸಬೇಕೆಂಬುದರಲ್ಲಿ ಸಾಕ್ಷಿಯು.—

"ಪರಮಾತ್ಮಮನುರ್ಜ್ಞೇಯಸ್ಸೋಽಹಂರೂಪಸ್ಸನಾತನಃ ||
ಜಾಯತೇ ಹಂಸಯೋರ್ಲೋಪಾದೋ ಮಿತ್ಯೇಕಾಕ್ಷರೋಮನುಃ"

ಇಲ್ಲಿ ಕೇವಲ ಸಚ್ಚಿದಾನನ್ದಬ್ರಹ್ಮವೇ—ನಿಷ್ಕಲವೆಂದೆನಿಸಿಕೊಂಡಿತು. ಪ್ರಪ

ಞ್ಚ ವಿಶಿಷ್ಟ ಮಾದುದೇ—ಸಕಲವೆಂದೆನಿಸಿಕೊಂಡಿತು. ಆ ನಿಷ್ಕಲಬ್ರಹ್ಮವು—ಪ್ರಣವಮನ್ತ್ರದಿಂದಲೇ ಪ್ರಕಾಶಿಸಲ್ಪಡುತ್ತಿಹುದು. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಪ್ರಮಾಣವಿರುವುದರಿಂದ, ಭೂಮ್ಯಾದಿ ಪಞ್ಚಬ್ರಹ್ಮವಿಶಿಷ್ಟನಾದ ಶಿವನು—ಪಞ್ಚಾಕ್ಷರಮನ್ತ್ರದಿಂ ಪ್ರಕಾಶಿಸಲ್ಪಡುತ್ತಿಹನು. ಸಕಲ ನಿಷ್ಕಲೋಭಯಾತ್ಮಕನಾದ ಶಿವನು—ಪ್ರಣವಸಹಿತ ಪಞ್ಚಾಕ್ಷರಿಯಿಂ ಪ್ರಕಾಶಿಸಲ್ಪಡುತ್ತಿಹನು. ಯದ್ಯಪಿ, "ಅಕಾರಂ ಬ್ರಹ್ಮಾಣಂ ನಾಭೌ | ಉಕಾರಂ ವಿಷ್ಣುಂ ಹೃದಯೇ | ಮಕಾರಂ ರುದ್ರಂ ಭ್ರೂಮಧ್ಯೇ | ಓಙ್ಕಾರಂ ಸರ್ವೇಶ್ವರಂ ದ್ವಾದಶಾನ್ತೇ" ಎಂದು ಶ್ರುತಿಯಿರುವುದರಿಂದ, ಪ್ರಣವವು—ಸಪ್ರಪಞ್ಚಬ್ರಹ್ಮಪ್ರಕಾಶಕವೇ ಸರಿ; ಹಾಗಾದರೂ, ವೇದ್ಯಸಂಸ್ಕಾರಾತ್ಮಕಮಾದ ಬಿನ್ದುಸ್ಪನ್ದಘಟಿತಮಾಗಿರುವುದರಿಂ, ಸೂಕ್ಷ್ಮಪ್ರಪಞ್ಚಮಯವಾದ ಕಾರಣದಿಂ, ನಿಷ್ಕಲಬ್ರಹ್ಮಪ್ರಕಾಶಕವಾಗಿರುತ್ತದೆ. ಸ್ಥೂಲಪ್ರಪಞ್ಚಮಯವಾದ ಪಂಚಾಕ್ಷರಮನ್ತ್ರವೆಂಬ ಕಲ್ಪವೃಕ್ಷಕ್ಕೆ ಪ್ರಣವವು ಬೀಜಮಾಗಿರ್ಪುದು. ಅದು ಹ್ಯಾಗೆಂದೊಡೆ.—ಆ ಪ್ರಣವವು—ಅಕಾರ, ಉಕಾರ, ಮಕಾರ, ಬಿನ್ದು, ನಾದರೂಪವಾದ ಪಞ್ಚಾವಯವಗಳುಳ್ಳುದಾದುದರಿಂ, ಪಞ್ಚಬ್ರಹ್ಮಾತ್ಮಕನಾದ, ಶಿವನನ್ನು ಪ್ರತಿಪಾದಿಸತಕ್ಕುದಾಗಿರ್ಪುದು. ಆತನು—ಸೂಕ್ಷ್ಮತನ್ಮಾತ್ರಗಳಿಗೆ ಆಶ್ರಯನಾದುದರಿಂ, ನಿಷ್ಕಲನೆಂದು ವ್ಯವಹರಿಸಲ್ಪಡುತ್ತಿಹನು. ಎಂಬಲ್ಲಿ ಸಾಕ್ಷಿಯು.—

"ಪ್ರಣವೇನೈವ ಮನ್ತ್ರೇಣ ಬೋಧ್ಯತೇ ನಿಷ್ಕಲಶ್ಶಿವಃ ||
ಪಞ್ಚಾಕ್ಷರೇಣ ಮನ್ತ್ರೇಣ ಪಞ್ಚಬ್ರಹ್ಮತನುಸ್ತಥಾ ||
ನಿಷ್ಕಲಸ್ಸಂವಿದಾಕಾರಸ್ಸಕಲೋ ವಿಶ್ವಮೂರ್ತಿತಃ ||
ಉಭಯಾತ್ಮಾ ಶಿವೋ ಮನ್ತ್ರೇ ಷಡಕ್ಷರಮಯೇ ಸ್ಥಿತಃ"

ಈ ಪಞ್ಚಾಕ್ಷರ ಮನ್ತ್ರಕ್ಕೆ ಪರ್ಯಾಯ ನಾಮಂಗಳೇನಿರ್ಪುವೆಂದೊಡೆ:—ಈ ಮನ್ತ್ರಕ್ಕೆ ಮೂಲಂ, ವಿದ್ಯಾ, ಶಿವಃ, ಶೈವಂ, ಸೂತ್ರಂ, ಪಞ್ಚಾಕ್ಷರಃ ಎಂಬೀ ಹೆಸರುಗಳು ವರ್ಣಸಂಖ್ಯೆಯಿಂದ ಹೇಳಲ್ಪಟ್ಟವು. ಎಂಬಲ್ಲಿ ಸಾಕ್ಷಿಯು.—

"ಮೂಲಂ ವಿದ್ಯಾ ಶಿವಃಶೈವಂ ಸೂತ್ರಂ ಪಞ್ಚಾಕ್ಷರಸ್ತಥಾ ||
ಏತಾನಿ ನಾಮಧೇಯಾನಿ ಕೀರ್ತಿತಾನಿ ಮಹಾಮನೋಃ"

ಲಿಙ್ಗಪೂಜಾನಿರತನು—ಸ್ಥಿರಚಿತ್ತನಾಗಿ, ಪ್ರಣವದಿಂ ಕೂಡಿ ಷಡಕ್ಷರಿಯಾದ ಈ ಪಞ್ಚಾಕ್ಷರೀ ವಿದ್ಯೆಯನ್ನು ಜಪಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಪಞ್ಚಾಕ್ಷರೀಮಿಮಾಂ ವಿದ್ಯಾಂ ಪ್ರಣವೇನ ಷಡಕ್ಷರೀಮ್ ||
ಜಪೇತ್ಸಮಾಹಿತೋ ಭೂತ್ವಾ ಲಿಙ್ಗಪೂಜಾಪರಾಯಣಃ "

ಅದನ್ನೆಂತು ಜಪಿಸಬೇಕೆಂದರೆ,—ಪರಿಶುದ್ಧವಾದ ಸ್ಥಳದಲ್ಲಿ ಮೃಗಾಜಿನ, ಚಿತ್ರಕಮ್ಬಳಾದಿಗಳ ಮೇಲೆ ಪದ್ಮಾಸನದಿಂ ಪೂರ್ವದಿಗಭಿಮುಖನಾಗಿ, ಅಥವಾ ಉತ್ತರಾಭಿಮುಖನಾಗಿ ಕುಳಿತು, ಭಸ್ಮರುದ್ರಾಕ್ಷಗಳಿಂದಲಙ್ಕೃತನಾಗಿ, " ಅಸ ಮ್ಪೂಜ್ಯ ಶಿವಂ ಸ್ತೋತ್ರ ಜಪಾತ್ಫಲ ಮುದೀರಿತಮ್ || ಸಮ್ಪೂಜ್ಯ ಚ ಶಿವಂ ಪ ಶ್ಚಾತ್ಫಲಂ ವಕ್ತುಂ ನ ಶಕ್ಯತೇ" ಎಂಬ ಶಿವಾಗಮೋಕ್ತಿಯಿರುವುದರಿಂದ, ನೈಮಿತ್ತಿಕ ಜಪವು ಶಿವಪೂಜಾನನ್ತರದಲ್ಲಿಯೇ ಮಾಡಲ್ಪಡತಕ್ಕುದಾಗಿ ಶಿವಪೂಜಾನನ್ತರದಲ್ಲಿ ಪ್ರಾ ಣಾಯಾಮತ್ರಯಮಂ ಗೈದು, ಷಡಙ್ಗನ್ಯಾಸವಂ ಮಾಡಿ, ದಿಗ್ಬನ್ಧಮಂ ಬಲಿದು, ಹೃದಯ ಕಮಲದಲ್ಲಿ ತ್ರಿನೇತ್ರನೂ, ಮಣ್ಡಲತ್ರಯ ವೇದತ್ರಯಾದಿ ತ್ರಿವಿಧವಸ್ತುಗ ಳಿಗೆ ಕಾರಣನೂ, ದೇವದೇವನೂ, ಉಮಾಸಹಿತನೂ, ಸರ್ವಾಲಙ್ಕಾರ ಸಹಿತನೂ, ಚನ್ದ್ರಶೇಖರನೂ ಆದ ಶಿವನನ್ನು ಸ್ಥಿರಮನಸ್ಕನಾಗಿ ಚಿನ್ತಿಸುತ್ತಾ, ಮಙ್ಗಳಾತ್ಮಕ ವಾದೀ ಮಹಾವಿದ್ಯೆಯನ್ನು " ಸಹಸ್ರಂ ವಾ ತದರ್ಧಂ ವಾ ತದರ್ಧಂವಾ ಶತಾಷ್ಟ ಕಮ್ || ಅಷ್ಟೋತ್ತರ ಸಹಸ್ರಂ ವಾ ಜಪಂ ಕುರ್ಯಾದತನ್ದ್ರಧೀಃ " ಎಂಬ ಅಂ ಶುಮದಾಗಮ ವಚನೋಕ್ತಪ್ರಕಾರಗಳಲ್ಲೊಂದು ಪ್ರಕಾರವನ್ನಾಶ್ರೈಸಿ, ಸದ್ಗುರು ವಿನಿಂದುಪದೇಶಿಸಲ್ಪಟ್ಟ ಮಾರ್ಗದಿಂದ ಮಾತೃಕಾಸಙ್ಘಟಿತಮಾಗಿ, ಸಗರ್ಭಜಪವಂ ಮಾಡತಕ್ಕುದು. ಎಂಬಲ್ಲಿ ಸಾಕ್ಷಿಯು.—

" ಪ್ರಾಣಾಯಾಮತ್ರಯಂ ಕೃತ್ವಾಪ್ರಾಙ್ಮುಖೋದಙ್ಮುಖೋಪಿವಾ ||
ಚಿನ್ತಯೇತ್ ಹೃದಯಾಮ್ಭೋಜೇ ದೇವದೇವಂ ತ್ರಿಯಂಬಕಮ್ ||
ಸರ್ವಾಲಂಕಾರಸಂಯುಕ್ತಂ ಸಾಮ್ಬಂ ಚನ್ದ್ರಾರ್ಧಶೇಖರಮ್ ||
ಜಪೇದೇತಾಂ ಮಹಾವಿದ್ಯಾಂ ಶಿವರೂಪಾಮನನ್ಯಧೀಃ "

ಮನ್ತ್ರೋಚ್ಚಾರರೂಪವಾದ ಜಪವು-ವಾಚಕವೆಂದೂ, ಉಪಾಂಶುವೆಂದೂ, ಮಾನಸವೆಂದೂ ಮೂರು ಬಗೆಯಾಗಿರುತ್ತದೆ. ವರ್ಣಸನ್ತಾನವಂ ಮೀರದೆ, ಸಮೀಪ ವರ್ತಿಗಳಿಂ ಕೇಳಲ್ಪಡುವಂತೆ ಮಾಡಲ್ಪಡುವ ಮನ್ತ್ರೋಚ್ಚಾರವು—ವಾಚಿಕಜಪವೆಂ ದೆನಿಸಿಕೊಳ್ಳುವುದು. ಅದು—ಮನೋವಚನ ಕಾಯಜನ್ಯಮಾದ ಸಕಲ ಪಾಪಗಳಂ ವಿನಾಶಗೊಳಿಸತಕ್ಕುದೆಂದು ತಿಳಿಯಲು ಯೋಗ್ಯವು. ಸ್ವಲ್ಪವಾಗಿ ಅಧರಪುಟವಂ ಸೋಂಕಿಸುತ್ತಾ ಪಕ್ಕದಲ್ಲಿರತಕ್ಕವರಿಂದ ಕೇಳಲ್ಪಡದಂತೆ ಉಚ್ಚರಿಸಲ್ಪಡುವ ಮನ್ತ್ರೋ

ಚ್ಚಾರವು—ಉಪಾಂಶು ಜಪವೆಂದೆನಿಸಿಕೊಳ್ಳುವುದು. ತುಟಿಯಂ ಸೋಂಕಿಸದೆ, ಜಿಹ್ವಾಗ್ರವನ್ನು ಅಲ್ಲಾಡಿಸದೆ, ಮನ್ತ್ರಾಕ್ಷರಸ್ವರೂಪವಾದ ಮನಸ್ಸಿನಿಂದ ಭಾವಿಸಲ್ಪಡುವ ಮನ್ತ್ರೋಚ್ಚಾರವು— ಮಾನಸಜಪವೆಂದು ಮನ್ತ್ರಜ್ಞರಿಂದ ನೆನೆಯಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.—

"ಜಪಸ್ತು ತ್ರಿವಿಧಃ ಪ್ರೋಕ್ತೋ ವಾಚಕೋಪಾಂಶುಮಾನಸಃ ||
ಶ್ರೂಯತೇ ಯಸ್ತು ಪಾರ್ಶ್ವಸ್ಥೈರ್ಯಥಾ ವರ್ಣಸಮನ್ವಯಃ ||
ವಾಚಿಕಸ್ಸತು ವಿಜ್ಞೇಯಸ್ಸರ್ವಪಾಪಪ್ರಭಞ್ಜನಃ ||
ಈಷತ್ಸ್ಪೃಷ್ಟ್ವಾಽಧರಪುಟಂ ಯೋ ಮನ್ದಮಭಿಧೀಯತೇ ||
ಪಾರ್ಶ್ವಸ್ಥೈರ ಶ್ರುತಸ್ಸೋಽಯ ಮುಪಾಂಶುಃ ಪರಿಕೀರ್ತಿತಃ ||
ಅಸ್ಪೃಷ್ಟ್ವಾಽಧರಮಸ್ಪನ್ದಿ ಜಿಹ್ವಾಗ್ರಂ ಯೋಽನ್ತರಾತ್ಮನಾ ||
ಭಾವ್ಯತೇ ವರ್ಣರೂಪೇಣ ಸ ಮಾನಸ ಇತಿ ಸ್ಮೃತಃ"

ಈ ಜಪಯಜ್ಞದ ಮಹತ್ತ್ವವೇನೆಂದೊಡೆ,—ಜ್ಯೋತಿಷ್ಟೋಮಾದಿ ಕರ್ಮಯಜ್ಞಗಳೂ, ಕೃಚ್ಛ್ರಚಾನ್ದ್ರಾಯಣಾದಿ ವ್ರತಗಳೂ, ಕನ್ಯಾದಾನಾದಿ ದಾನಂಗಳೂ, ಅತ್ಯುಗ್ರ ತಪಸ್ಸುಗಳೂ ಜಪಯಜ್ಞದ ಹದಿನಾರು ಭಾಗದೊಳಗೊಂದು ಭಾಗಕ್ಕೆ ಸಮಾನಗಳಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

"ಯಾವನ್ತಃ ಕರ್ಮಯಜ್ಞಾದ್ಯಾಃ ವ್ರತದಾನತಪಾಂಸಿ ಚ ||
ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹನ್ತಿ ಷೋಡಶೀಮ್"

ಈ ಹೇಳಲ್ಪಟ್ಟ ತ್ರಿವಿಧಜಪಕ್ಕೂ ಮಾಹಾತ್ಮ್ಯವು ಒಂದೇ ಬಗೆಯಾಗಿರ್ಪುದೋ ? ಬೇರೆಬೇರೆ ಇರ್ಪುದೋ ? ಎಂದರೆ,—ವಾಚಿಕ ಜಪದ ಮಹತ್ವಕ್ಕಿಂತ ಉಪಾಂಶು ಜಪವು—ನೂರು ಮಡಿ ಮಹತ್ತ್ವಮುಳ್ಳುದು. ಮಾನಸ ಜಪವು ಉಪಾಂಶುಜಪಕ್ಕಿಂತ ಸಹಸ್ರಮಡಿ ಮಹತ್ತ್ವಮುಳ್ಳುದು. ಎಂಬಂಶದಲ್ಲಿ ಸಾಕ್ಷಿಯು.—

"ಮಾಹಾತ್ಮ್ಯಂ ವಾಚಿಕಸ್ಯೈತಜ್ಜಪಯಜ್ಞಸ್ಯ ಕೀರ್ತಿತಮ್ ||
ತಸ್ಮಾಚ್ಛತಗುಣೋಪಾಂಶುಸ್ಸಹಸ್ರಂ ಮಾನಸಸ್ಸ್ಮೃತಃ"

ಈ ಜಪಂಗಳೊಳಗೆ ಯಾವ ಜಪವು ಶ್ರೇಷ್ಠವಾದುದು ? ಎಂದರೆ,—ಈ ಮಹಾಮನ್ತ್ರಕ್ಕೆ ವಾಚಿಕ ಜಪದ ದೆಸೆಯಿಂದ ಉಪಾಂಶುವು, ಅದರತ್ತಣಿಂ ಮಾನಸವು ಅಧಿಕವಾಗಿ, ಕ್ರೂರವಾದ ಸಂಸಾರವಂ ಕೆಡಿಸುವುದಾಗಿ ಶ್ರೇಷ್ಠವಾಗಿರುವುದು. ಎಂಬಲ್ಲಿ ಸಾಕ್ಷಿಯು.—

"ವಾಚಿಕಾತ್ತದುಪಾಂಶೋಶ್ಚ ಜಪಾದಸ್ಯ ಮಹಾಮನೋಃ"
ಮಾನಸೋಽಪಿ ಜಪಶ್ಶ್ರೇಷ್ಠೋ ಘೋರಸಂಸಾರನಾಶಕಃ"

ಈ ವಾಚಕಾದಿ ಜಪಂಗಳ ವಿಷಯದಲ್ಲಿ ಈ ಹೇಳಲ್ಪಟ್ಟ ಪ್ರಕಾರದಿಂ ಭಾವವನ್ನತಿಕ್ರಮಿಸದೆ, ಕ್ರಮವನ್ನತಿಕ್ರಮಿಸದೆ, ಈ ಪಞ್ಚಾಕ್ಷರೀವಿದ್ಯೆಯನ್ನು—ಮಲಮಾಯಾದಿ ಪಾಶನಿವೃತ್ತ್ಯರ್ಥಮಾಗಿ, ಜಪಿಸಬೇಕೆಂಬಲ್ಲಿ ಸಾಕ್ಷಿಯು.—

"ಏತೇಷ್ವೇಕೇನ ವಿಧಿನಾ ಯಥಾಭಾವಂ ಯಥಾಕ್ರಮಮ್ ||
ಜಪೇತ್ಪಞ್ಚಾಕ್ಷರೀ ಮೇತಾಂ ವಿದ್ಯಾಂ ಪಾಶವಿಮುಕ್ತಯೇ"

ಈ ಮನ್ತ್ರದಿಂದಲೇ ಶಿವಲಿಙ್ಗವಂ ಪೂಜಿಸಬಹುದೋ ? ಎಂದರೆ,—ಯಮನಿಯಮಾದ್ಯಷ್ಟಾಙ್ಗಯೋಗ ಸಮ್ಪನ್ನನೂ, ಶುದ್ಧಾನ್ತಃ ಕರಣನೂ "ರುದ್ರೋ ಭೂತ್ವಾ ಯಜೇದ್ರುದ್ರಂ ನಾರುದ್ರೋರುದ್ರಮರ್ಚಯೇತ್" ಎಂಬ ವಚನಾನುಸಾರವಾಗಿ ಶಿವದೀಕ್ಷಾಖ್ಯವಾದ ಸಂಸ್ಕಾರದಿಂ ಶಿವತ್ವವನ್ನೈದಿದ ಪುರುಷನು—ಈ ಷಡಕ್ಷರ ಮನ್ತ್ರದಿಂ ತನ್ನ ಇಷ್ಟಲಿಙ್ಗವನ್ನು ಕಾಲತ್ರಯದಲ್ಲಿಯೂ ಪೂಜಿಸಬೇಕು. ಎಂಬಲ್ಲಿ ಸಾಕ್ಷಿಯು.—

"ಅನೇನ ಮೂಲಮನ್ತ್ರೇಣ ಸ್ವೇಷ್ಟಲಿಙ್ಗಂ ಪ್ರಪೂಜಯೇತ್ ||
ನಿತ್ಯಂ ನಿಯಮಸಮ್ಪನ್ನಃ ಪ್ರಯತಾತ್ಮಾ ಶಿವಾತ್ಮಕಃ"

ಈ ಮೂಲಮನ್ತ್ರದಿಂ ಮಾಡಲ್ಪಟ್ಟ ಪೂಜೆಗೇನು ಫಲವೆಂದರೆ -ಭಕ್ತಿಯಿಂದ ಶಿವಷಡಕ್ಷರಮನ್ತ್ರದಿಂದ ಶಿವನನ್ನು ಪೂಜಿಸಿದವನು-ಈ ಮನ್ತ್ರದ ಮಹತ್ತ್ವದಿಂ ಶಿವಸ್ಥಾನವನ್ನೈದುವನು. ಎಂಬಲ್ಲಿ ಸಾಕ್ಷಿಯು.—

"ಭಕ್ತ್ಯಾ ಷಡಕ್ಷರೇಣೈವ ಯಶ್ಶಿವಂ ಸಕೃದರ್ಚಯೇತ್ ||
ಸೋಽಪಿ ಗಚ್ಛೇಚ್ಛಿವಸ್ಥಾನಂ ಮನ್ತ್ರಸ್ಯಾಸ್ಯೈವ ಗೌರವಾತ್"

ವ್ರತನಿಯಮಾದಿಗಳಿಂ ಸದ್ಗತಿಯುಂಟಪ್ಪುದರಿಂ ಶಿವಪೂಜೆಯಿಂದೇನೆನೆ,—ಜಲಾಹಾರಿಗಳು, ವಾಯುಭಕ್ಷಕರು, ಶರಗೆಲೆಯಂ ಭಕ್ಷಿಸತಕ್ಕವರು, ಕೃಛ್ರಚಾನ್ದ್ರಾಯಣಾದಿ ವ್ರತಗಳಿಂ ಕೃಶರಾದವರು ಯಾರುಂಟೋ, ಅವರಿಗೆ ಈ ವ್ರತಗಳಿಂ ಶಿವಲೋಕಪ್ರಾಪ್ತಿಯುಂಟಾಗುವುದಿಲ್ಲವು. ಆ ಕಾರಣದಿಂ ತಪಸ್ಸುಗಳೂ ಅಶ್ವಮೇಧ ಮೊದಲಾದ ಯಜ್ಞಗಳೂ, ಕೃಛ್ರಚಾನ್ದ್ರಾಯಣ ಮೊದಲಾದ ನಿಯಮಗಳೂ ಇವಿಷ್ಟೂ ಶಿವಷಡಕ್ಷರಮನ್ತ್ರಸಹಿತವಾಗಿ ಮಾಡಲ್ಪಡುವ ಲಿಙ್ಗಪೂಜೆಯ ಕೋಟ್ಯಂಶದಲ್ಲೊಂದಂಶಕ್ಕೂ ಸಮಾನವಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.-

"ಅಬ್ಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಶಿತಾಃ ||
ತೇಷಾಮೇತೈರ್ವ್ರತೈರ್ನಾಸ್ತಿ ಶಿವಲೋಕಸಮಾಗಮಃ ||

ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಸ್ತಥಾ ||
ಷಡಕ್ಷರಾರ್ಚನಸ್ಯೈತೇಕೋಟ್ಯಂಶೇನಾಪಿ ನೋ ಸಮಾಃ''

ಯಾವನು-ಮಲಿನವಾದ ಮನಸ್ಸುಳ್ಳವನಾದಾಗ್ಯೂ, ನಿರ್ಮಲವಾದ ಮನಸ್ಸುಳ್ಳವನಾದಾಗ್ಯೂ, ಪತಿತನಾದಾಗ್ಯೂ ಒಂದುಬಾರಿಯಾದರೂ ಪಞ್ಚಾಕ್ಷರಮನ್ತ್ರದಿಂದ ಲಿಙ್ಗವನ್ನು ಪೂಜಿಸುವನೋ, ಅವನು-ಸಮಸ್ತಪಾಪಗಳಿಂದಲೂ ಬಿಡಲ್ಪಡುವನು. ಎಂಬಲ್ಲಿ ಸಾಕ್ಷಿಯು.—

,, ಅಶುದ್ಧೋ ವಾ ವಿಶುದ್ಧೋ ವಾ ಸಕೃತ್ಪಞ್ಚಾಕ್ಷರೇಣ ಯಃ ||
ಪೂಜಯೇತ್ಪತಿತೋ ವಾಪಿ ಮುಚ್ಯತೇ ನಾತ್ರ ಸಂಶಯಃ''

ಪಞ್ಚಾಕ್ಷರಮಹಾಮಂತ್ರವನ್ನು ಒಂದುಬಾರಿ ಉಚ್ಚರಿಸಿದ ಮಾತ್ರದಿಂ ಸಕಲಪ್ರಾಣಿಗಳಿಗೂ ಸಕಲಪಾಪಕ್ಷಯುವಹುದು. ಎಂಬಲ್ಲಿ ಸಾಕ್ಷಿಯು.—

,, ಸಕೃದುಚ್ಚಾರಮಾತ್ರೇಣ ಪಞ್ಚಾಕ್ಷರಮಹಾಮನೋಃ ||
ಸರ್ವೇಷಾಮಪಿ ಜನ್ತೂನಾಂ ಸರ್ವಪಾಪಕ್ಷಯೋ ಭವೇತ್''

ಸಮಸ್ತವಾದ ಶಿವಾಗಮಗಳಲ್ಲಿ ಈ ಪಞ್ಚಾಕ್ಷರಮನ್ತ್ರದಿಂ ಬೇರೆಯಾದ ಮನ್ತ್ರಗಳು ಬಹಳವಾಗಿದ್ದರೂ ಅವು ಪುರಶ್ಚರಣಬಾಹುಳ್ಯದಿಂ ಫಲಗಳನ್ನು ಕೊಡುತ್ತವೆ. ಮಹಾಸಮರ್ಥವೂ ಈಶ್ವರನ ವಿಶ್ವಮಯತ್ವ ವಿಶ್ವೋತ್ತೀರ್ಣತ್ವ ರೂಪಮಾದ ಮಹತ್ತ್ವವಂ ಪ್ರತಿಪಾದಿಸತಕ್ಕುದೂ ಆದ ಈ ಪಞ್ಚಾಕ್ಷರಮನ್ತ್ರವಾದರೋ, ಒಂದೇ ಬಾರಿ ಉಚ್ಚರಿಸಲ್ಪಟ್ಟ ಮಾತ್ರದಿಂದಲೇ ಸಕಲಸಿದ್ಧಿಗಳಂ ಕೊಡತಕ್ಕುದು ಎಂಬಲ್ಲಿ ಸಾಕ್ಷಿಯು.—

,, ಅನ್ಯೇऽಪಿ ಬಹವೋ ಮನ್ತ್ರಾ ವಿದ್ಯನ್ತೇ ಸಕಲಾಗಮೇ ||
ಭೂಯೋಭೂಯಸ್ಸಮಭ್ಯಾಸಾತ್ಪುರುಷಾರ್ಥಪ್ರದಾಯಿನಃ ||
ಏಷಮನ್ತ್ರೋ ಮಹಾಶಕ್ತ ಈಶ್ವರಪ್ರತಿಪಾದಕಃ ||
ಸಕೃದುಚ್ಚಾರಣಾದೇವ ಸರ್ವಸಿದ್ಧಿಪ್ರದಾಯಕಃ''

ಯಾವನು —ಪಞ್ಚಾಕ್ಷರ ಮನ್ತ್ರವನ್ನುಚ್ಚರಿಸುತ್ತಾ, ಲಿಙ್ಗಮಸ್ತಕದಮೇಲೆ ಪುಷ್ಪವನ್ನಿಡುವನೋ, ಅವನಿಂದ ಸಹಸ್ರವಾಜಪೇಯ ಯಾಗಫಲವು ಇಚ್ಛಾವಿಷಯವಾಗಿ ಮಾಡಲ್ಪಡುವುದು. ಎಂಬಲ್ಲಿ ಸಾಕ್ಷಿಯು.—

,, ಪಞ್ಚಾಕ್ಷರೀಂ ಸಮುಚ್ಚಾರ್ಯ ಪುಷ್ಪಂ ಲಿಂಗೇ ವಿನಿಕ್ಷಿಪೇತ್ ||
ಯಸ್ತಸ್ಯ ವಾಜಪೇಯಾನಾಂ ಸಹಸ್ರಫಲಮಿಷ್ಯತೇ''

ಪ್ರಾತಸ್ಸಾಯಂಕಾಲಗಳಲ್ಲಿ ಮಾಡಲ್ಪಡತಕ್ಕ ಅಗ್ನಿಹೋತ್ರವು ಋಗ್ಯಜುಸ್ಸಾಮಾಧ್ಯಯನಂಗಳು ಬಹುದಕ್ಷಿಣೆಯುಳ್ಳ ಜ್ಯೋತಿಷ್ಟೋಮಾದಿಯಾಗಗಳು ಇವಿಷ್ಟೂ ಪಞ್ಚಾಕ್ಷರಮನ್ತ್ರಜಪದ ಕೋಟ್ಯಂಶದಲ್ಲೊಂದಂಶಕ್ಕೂ ಸಮಾನಗಳಲ್ಲವು. ಎಂಬಲ್ಲಿ ಸಾಕ್ಷಿಯು.—

" ಅಗ್ನಿಹೋತ್ರಂ ತ್ರಯೋವೇದಾ ಯಜ್ಞಾಶ್ಚ ಬಹುದಕ್ಷಿಣಾಃ ||
ಪಞ್ಚಾಕ್ಷರಜಪಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ "

ಬಳಿಕ ಈ ಪಞ್ಚಾಕ್ಷರಮನ್ತ್ರಸಿದ್ಧಿಯುಳ್ಳ ಮಹಾಪುರುಷರ ಮಹತ್ತ್ವಪ್ರಕಾಶಮುಖದಿಂದೀಮನ್ತ್ರಕ್ಕೆ ಆಧಿಕ್ಯಮಂ ಪ್ರತಿಪಾದಿಸುವಲ್ಲಿ;

ಪೂರ್ವದಲ್ಲಿ ಶಿವಜ್ಞಾನಯೋಗನಿಷ್ಠನಾದ ಸಾನನ್ದಗಣೇಶ್ವರನು-ಪಞ್ಚಾಕ್ಷರಮನ್ತ್ರಮಂ ವಾಚಕರೂಪದಿಂದುಚ್ಚರಿಸಿ, ಇಪ್ಪತ್ತೆಂಟು ಕೋಟಿನಾಯಕ ನರಕಗಳಲ್ಲಿದ್ದ ಪಾಪಿಗಳನ್ನು ಉದ್ಧರಿಸಿದನು. ಎಂಬಲ್ಲಿ ಸಾಕ್ಷಿಯು.—

" ಪುರಾ ಸಾನನ್ದಯೋಗೀನ್ದ್ರಶ್ಶಿವಜ್ಞಾನಪರಾಯಣಃ ||
ಪಞ್ಚಾಕ್ಷರೀ ಸಮುಚ್ಚಾರ್ಯ ನರಕಾನುದತಾರಯತ್ "

ಮತ್ತಂ, ಪೂರ್ವದಲ್ಲಿ ಶತಾನನ್ದನೆಂಬ ಮುನೀಶ್ವರನು- ಈ ಪಞ್ಚಾಕ್ಷರಮನ್ತ್ರಜಪಸಿದ್ಧಿಯಿಂದ ಪಾಪಿಯಾದ ಸಜ್ಗ್ನರನ ನರಕಲೋಕವನ್ನು ಸ್ವರ್ಗಸದೃಶವನ್ನಾಗಿ ಮಾಡಿದನು. ಎಂಬಲ್ಲಿ ಸಾಕ್ಷಿಯು.—

" ಸಿದ್ಧ್ಯಾ ಪಞ್ಚಾಕ್ಷರಸ್ಯಾಸ್ಯ ಶತಾನನ್ದಃ ಪುರಾ ಮುನಿಃ ||
ನರಕಂ ಸ್ವರ್ಗಮಕರೋತ್ಸಜ್ಗ್ನರಸ್ಯಾಪಿ ಪಾಪಿನಃ "

ಮತ್ತಂ, ಪೂರ್ವದಲ್ಲಿ ಉಪಮನ್ಯುವೆಂಬ ಯೋಗೀಶ್ವರನು- ಈ ಪಞ್ಚಾಕ್ಷರಮನ್ತ್ರಜಪದಿಂ ಸಿದ್ಧಿಗಳನ್ನು ಹೊಂದಿದವನಾಗಿ, ಶ್ರೀ ಪರಮೇಶ್ವರನ ಅನುಗ್ರಹದ ದೆಸೆಯಿಂ ಶಿವಸಿದ್ಧಾನ್ತದಲ್ಲಿ ಆಚಾರ್ಯತ್ವವನ್ನು ಪಡೆದನು. ಎಂಬಲ್ಲಿ ಸಾಕ್ಷಿಯು.—

" ಉಪಮನ್ಯುಃ ಪುರಾ ಯೋಗೀ ಮನ್ತ್ರೇಣಾನೇನ ಸಿದ್ಧಿಮಾನ್ ||
ಲಬ್ಧವಾನ್ಪರಮೇಶಾನಾಚ್ಛೈವಶಾಸ್ತ್ರಪ್ರವಕ್ತೃತಾಮ್ "

ಬಿಡಲ್ಪಟ್ಟ ಪಾಪಕರ್ಮವುಳ್ಳ ವಸಿಷ್ಠ, ವಾಮದೇವ ಮೊದಲಾದ ಮುನಿಗಳು- ಈ ಪಞ್ಚಾಕ್ಷರಮನ್ತ್ರದಿಂ ಸಿದ್ಧರಾಗಿ, ಶಾಪಾನುಗ್ರಹ ಸಮರ್ಥರಾದರು. ಎಂಬಲ್ಲಿ ಸಾಕ್ಷಿಯು.—

" ವಸಿಷ್ಠವಾಮದೇವಾದ್ಯಾ ಮುನಯೋ ಮುಕ್ತಕಿಲ್ಬಿಷಾಃ ||
ಮನ್ತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋಽಭವನ್ "

ಬ್ರಹ್ಮ ವಿಷ್ಣು ರುದ್ರರಿಗೆ—ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳಲ್ಲಿ ಸಾಮರ್ಥ್ಯವು ಈ ಪಞ್ಚಾಕ್ಷರಮನ್ತ್ರದ ಮಹಿಮೆಯಿಂದಲೇ ಉಂಟಾಗಿರುತ್ತದೆ. ಎಂಬಲ್ಲಿ ಸಾಕ್ಷಿಯು.—

"ಬ್ರಹ್ಮಾದೀನಾಞ್ಚ ದೇವಾನಾಂ ಜಗತ್ಸೃಷ್ಟ್ಯಾದಿಕರ್ಮಣಿ ||
ಮನ್ತ್ರಸ್ಯಾಸ್ಯೈವ ಮಾಹಾತ್ಮ್ಯಾತ್ಸಾಮರ್ಥ್ಯಮುಪಜಾಯತೇ"

ಮತ್ತಂ, ಬಹುಮಾತುಗಳಿಂದೇನು ಪ್ರಯೋಜನವು? ಮಹಾತ್ಮನಾದ ಯಾವನು ಮೊದಲಲ್ಲಿ ಪ್ರಣವದಿಂದ ಕೂಡಿದ ಈ ಪಞ್ಚಾಕ್ಷರಮನ್ತ್ರವನ್ನು ಜಪಿಸಿ, ಉತ್ಕೃಷ್ಟವಾದ ಭಕ್ತಿಯಿಂದ ದೇವದೇವನಾದ ಶಿವನನ್ನು ಪೂಜಿಸುತ್ತಾನೋ, ಅತನು ಸಕಲಪಾಪಂಗಳಿಂದಲೂ ಬಿಡಲ್ಪಟ್ಟವನಾಗಿ, ಮೋಕ್ಷಸಮ್ಪತ್ತನ್ನು ಪಡೆಯುತ್ತಾನೆ. ಎಂಬಲ್ಲಿ ಸಾಕ್ಷಿಯು.—

"ಕಿಮಿಹ ಬಹುಭಿರುಕ್ತೈರ್ಮನ್ತ್ರಮೇನಂ ಮಹಾತ್ಮಾ
ಪ್ರಣವಸಹಿತಮಾದೌ ಯಸ್ತು ಪಞ್ಚಾಕ್ಷರಾಖ್ಯಮ್ ||
ಜಪತಿ ಪರಮಭಕ್ತ್ಯಾ ಪೂಜಯನ್ದೇವದೇವಮ್
ವಿಗತದುರಿತಬನ್ಧೋ ಮೋಕ್ಷಲಕ್ಷ್ಮೀಂ ಪ್ರಯಾತಿ"

ಇತಿ ಶ್ರೀಮತ್ಪರಶಿವ ಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾ
ನವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ
ಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವಸಾ
ಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾ
ರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್
ಅಷ್ಟಾವರಣಪ್ರಕರಣದಲ್ಲಿ ಮನ್ತ್ರಸ್ಥಲ
ನಿರೂಪಣಮ್.



|| ಶ್ರೀಃ ||

ಗುರುಲಿಙ್ಗಜಙ್ಗಮಾತ್ಮನೇ ಶಿವಾಯ ನಮಃ.

## ಪಾದೋದಕಸ್ಥಲವ್.



ಶಿವಪಾದೋದಕಸ್ವೀಕಾರಕ್ರಮವಂ ನಿರೂಪಿಸುವೆನದೆಂತೆನೆ.—

ಅಖಣ್ಡನೂ, ಅನನ್ತನೂ, ಮಿತಿಯಿಲ್ಲದವನೂ, ವಿಘ್ನರಹಿತನೂ, ಕೇಡಿಲ್ಲದವನೂ, ಇಷ್ಟಾರ್ಥವಂ ಕೊಡತಕ್ಕವನೂ, ನಿತ್ಯನೂ, ಉತ್ಕೃಷ್ಟನೂ, ಪವಿತ್ರನೂ, ಷಡ್ಗುಣೈಶ್ವರ್ಯಸಮ್ಪನ್ನನೂ, ಆದ ಶ್ರೀ ಶಿವಸ್ವಾಮಿಯಪಾದಂಗಳನ್ನು ಶ್ರೀರುದ್ರದಿಂದಲೂ, ಪವಿತ್ರಮನ್ತ್ರದಿಂದಲೂ, ಶತಧಾರ ಸೂಕ್ತದಿಂದಲೂ. ಸಹಸ್ರಧಾರ ಸೂಕ್ತದಿಂದಲೂ ಅಭಿಷೇಕಿಸಿ, "ಸರ್ವೋ ವೈ ರುದ್ರಃ"–"ಋತಗ್ಂ ಸತ್ಯಂ ಪರಂ ಬ್ರಹ್ಮ ಪುರುಷಮ್". ಎಂಬೀ ಎರಡುಮನ್ತ್ರಗಳಿಂದ ಸ್ವೀಕರಿಸಬೇಕು. ಎಂಬಲ್ಲಿ ಸಾಕ್ಷಿಯು.-

"ಅಥಾತೋ ಮಹಾದೇವಸ್ಯ ಪಾದೋದಕವಿಧಿಂ
ವ್ಯಾಖ್ಯಾಸ್ಯಾಮಃ, ಶ್ರೀ ರುದ್ರೇಣ ಪವಿತ್ರೇಣ
ಶತಧಾರೇಣ ಸಹಸ್ರಧಾರೇಣಾಚ್ಛಿದ್ರಮನನ್ತ
ಮಪರಿಮಿತ ಮವಿಘ್ನ ಮಕ್ಷಯ ಮಭೀಷ್ಟದ
ಮಚ್ಯುತಂ ಪರಮಂ ಪವಿತ್ರಂ ಭಗವನ್ತಮೇವಂ
ಸ್ನಾಪಯಿತ್ವಾ, ಸರ್ವೋ ವೈ ರುದ್ರ ಇತಿದ್ವಾಭ್ಯಾಂ
ಋತಂಸತ್ಯಂಪರಂಬ್ರಹ್ಮೇತಿ ಪ್ರಾಶಯೇತ್"

ಎಂದು ಬೋಧಾಯನಸೂತ್ರವು.

ಮತ್ತಂ, ಭಗವನ್ತನಾದ ಶಿವನ ಪಾದಂಗಳನ್ನು ಪ್ರಕ್ಷಾಳಿಸಿ, ಆ ಪಾದೋದಕದಿಂ ತಙ್ಬವಂ ತುಂಬಿ, ಗನ್ಧಾಕ್ಷತೆ ಪುಷ್ಪ ಮೊದಲಾದವುಗಳಿಂ ಪೂಜಿಸಿ, ಚರುವಂ ಸಮರ್ಪಿಸಿ, "ಇಮಮ್ಮೇ ಗಂಗೇಯಮುನೇ" ಎಂಬ ಮನ್ತ್ರದಿಂದಭಿಮಂತ್ರಿಸಿ, "ಕದ್ರುದ್ರಾಯ" ಎಂಬ ಮನ್ತ್ರದಿಂದಲೂ "ಮಾತ್ವಾರುದ್ರಾಯ" ಎಂಬ ಮನ್ತ್ರದಿಂದಲೂ ಸಮ್ಮಾರ್ಜನವಂ ಮಾಡಿ, "ಋತಂಸತ್ಯಂಪರಂಬ್ರಹ್ಮ" ಎಂಬ ಮನ್ತ್ರದಿಂ ಸ್ವೀಕರಿಸಬೇಕು. ಈ ರೀತಿಯಿಂದಾವನು—ಶ್ರೀ ಶಿವಪಾದೋದಕವಂ ಸ್ವೀಕರಿಸುತ್ತಾನೋ, ಆತನು-ತನ್ನ ಕುಲದಲ್ಲಿ ಪುಟ್ಟಿದ ತಾನು ಮೊದಲಾದ ಹತ್ತುಮಂದಿಯನ್ನೂ ಭವಸಾಗರದದೆಸೆಯಿಂ ದಾಂಟಿಸುವನು. ಎಂಬಲ್ಲಿ ಸಾಕ್ಷಿಯು.—

“ಭಗವತಃ ಪಾದೌ ಪ್ರಕ್ಷಾಳ್ಯ, ಶಙ್ಖಂ ಪ್ರಪೂರ್ಯ,
ಗನ್ಧಪುಷ್ಪಾಕ್ಷತೈರಭ್ಯರ್ಚ್ಯ, ಚರುಂ ನಿವೇದ್ಯ,
ಇಮಮ್ಮೇಗಂಗೇಯಮುನೇತ್ಯಭಿಮನ್ತ್ರ್ಯ,
ಕದ್ರುದ್ರಾಯೇತಿ-ಮಾತ್ವಾರುದ್ರೇತಿ—
ಸಮ್ಮಾರ್ಜನಂ ಕೃತ್ವಾ, ಋತಂಸತ್ಯಂಪರಂಬ್ರಹ್ಮೇತಿ
ಪ್ರಾಶಯೇತ್. ಯಏವಂಕುರ್ಯಾತ್ಸ್ವಕುಲಜಾ
ನ್ಧಶಪೂರ್ವಾನ್ದಶಾಪರಾನಾತ್ಮಾನಂ ಚ ತಾರಯೇತ್”

ಎಂದು ಜಾಬಾಲಶಾಖಾವಾಕ್ಯವು.

ಕುರುಕ್ಷೇತ್ರವೂ, ನೈಮಿಶಾರಣ್ಯವೂ, ಮತ್ತೂ ಮಙ್ಗಳಕರಗಳಾದ ಕ್ಷೇತ್ರಗಳೂ ಶಿವನ ಪಾದತೀರ್ಥದ ಹದಿನಾರನೆಯ ಒಂದು ಭಾಗವನ್ನು ಪಡೆಯಲಾರವು. ಎಂಬಲ್ಲಿ ಸಾಕ್ಷಿಯು.—

“ಕುರುಕ್ಷೇತ್ರಂ ನೈಮಿಶಂ ಚ ಭೂಮಿಭಾಗಾಶ್ಚ ಯೇಶುಭಾಃ ||
ಶಿವಪಾದೋದಕಸ್ಯೈತೇ ಕಲಾಂ ನಾರ್ಹನ್ತಿ ಷೋಡಶೀಮ್”

ಮತ್ತಂ, ಅಕಾಲಮೃತ್ಯುವನ್ನು ಕೊಲ್ಲುವುದೂ, ಸಮಸ್ತ ರೋಗಂಗಳನ್ನು ಪರಿಹರಿಸುವುದೂ, ಸಮಸ್ತ ಪಾಪಸಮೂಹವನ್ನು ಕೆಡಿಸುವುದೂ ಆದ ಶಿವಪಾದತೀರ್ಥವು ಮಙ್ಗಳಕರವಾದದ್ದು. ಎಂಬಲ್ಲಿ ಸಾಕ್ಷಿಯು.—

“ಅಕಾಲಮೃತ್ಯುಮಥನಂ ಸರ್ವವ್ಯಾಧಿವಿನಾಶನಮ್ ||
ಸರ್ವಪಾಪೌಘಶಮನಂ ಶರ್ವೋಃ ಪಾದೋದಕಂ ಶುಭಮ್”

ಮತ್ತಂ, ಸಮಸ್ತೋತ್ಪಾತಂಗಳನ್ನು ಕೆಡಿಸುವುದೂ, ಸಮಸ್ತರೋಗಗಳಂ ಭೇದಿಸುವುದೂ, ದುಷ್ಟಗ್ರಹಂಗಳಂ ಪರಿಹರಿಸುವುದೂ, ಇಷ್ಟಸಿದ್ಧಿಪ್ರದಾಯಕವೂ, ಸಮಸ್ತಮಙ್ಗಳಗಳಿಗೂ ಮಙ್ಗಳವಾದುದೂ, ಸಕಲಪವಿತ್ರಂಗಳಿಗೂ ಪವಿತ್ರವಾದುದೂ ಆದ, ಆ ಶಿವಪಾದೋದಕವನ್ನು ಶಿರಸ್ಸಿನಲ್ಲಿ ಧರಿಸುವುದರತ್ತಣಿಂ ಆ ಕ್ಷಣದಲ್ಲಿಯೇ ಸಕಲತೀರ್ಥಸ್ನಾನಫಲವು ಹೊಂದಲ್ಪಡುತ್ತದೆ. ಎಂಬಲ್ಲಿ ಸಾಕ್ಷಿಯು.—

“ಸರ್ವೋತ್ಪಾತಪ್ರಶಮನಂ ಸರ್ವರೋಗಪ್ರಭೇದನಮ್ ||
ದುಷ್ಟಗ್ರಹೋಪಶಮನಮಿಷ್ಟಸಿದ್ಧಿಪ್ರದಾಯಕಮ್ ||
ಸರ್ವಮಙ್ಗಳಮಾಙ್ಗಳ್ಯಂ ಸರ್ವಪಾವನಪಾವನಮ್ ||
ಸರ್ವತೀರ್ಥಫಲಂ ಸದ್ಯಃ ಪ್ರಾಪ್ಯತೇ ಮೂರ್ಧ್ನಿಧಾರಣಾತ್”

ಮತ್ತಂ, ಅಗಮ್ಯಗಮನವನ್ನು ಮಾಡಿದವನೂ, ಪಾಪಕರವಾದ ನಡವಳಿಕೆಗ

ಳುಳ್ಳವರೂ ಶಿವಪಾದೋದಕವಂ ಧರಿಸುವುದರತ್ತಣಿಂ ಆ ಕ್ಷಣದಲ್ಲಿಯೇ ಶೀಘ್ರವಾಗಿ ಪರಿಶುದ್ಧರಾಗುತ್ತಾರೆ. ಎಂಬಲ್ಲಿ ಸಾಕ್ಷಿಯು.—

" ಅಗಮ್ಯಗಾಮಿನಶ್ಚೈವ ಪಾಪಾಚಾರಾಶ್ಚ ಯೇ ನರಾಃ ||
ತೇಽಪಿ ಪೂತಾ ಭವನ್ತ್ಯಾಶು ಸದ್ಯಃ ಪಾದಾಮ್ಬುಧಾರಣಾತ್ "

ಮತ್ತಂ, ಶಿವಪಾದೋದಕವಂ ಮುಟ್ಟುವುದರತ್ತಣಿಂ ಸಕಲ ವಿಧವಾದ ಪಾಪವು ನಾಶವಾಗುತ್ತದೆ. ಆದ್ದರಿಂದ ಪಾಪಿಯೂ ಶಿವಪಾದೋದಕವಂ ಧರಿಸಿದರೆ ಪರಿಶುದ್ಧನಾಗುವನು. ಎಂಬಲ್ಲಿ ಸಾಕ್ಷಿಯು.—

" ಶಿವಪಾದಾಮ್ಬುಸಂಸ್ಪರ್ಶಾತ್ಸರ್ವಪಾಪಂ ಪ್ರಣಶ್ಯತಿ ||
ದೂಷಿತಶ್ಚಾಪಿ ಪಾದಾಮ್ಬು ಬಿಭ್ರಚ್ಛುದ್ಧಿಮವಾಪ್ನುಯಾತ್ "

ಮತ್ತಂ, ಪಾಪಜಾಲಗಳನ್ನು ಛೇದಿಸತಕ್ಕುದೂ, ಶ್ರೇಷ್ಠವಾದುದೂ ಆದ ತ್ರಿಪುರಧ್ವಂಸಿಯಾದ ಪರಮೇಶ್ವರನ ಪಾದೋದಕವನ್ನು—ಪ್ರಮಥರು ಕೈಗಳೆಂಬ ಮುತ್ತಿನಚಿಪ್ಪುಗಳಿಂದ ತೆಗೆದುಕೊಂಡು, ಇಚ್ಛಾನುಸಾರವಾಗಿ ಪಾನವಂ ಮಾಡಿದರು. ಎಂಬಲ್ಲಿ ಸಾಕ್ಷಿಯು.—

" ಪಾದೋದಕಂ ಪುರಭಿದಃ ಪಾಪಜಾಲಹರಂ ಪರಮ್ ||
ಪಾಣಿಶುಕ್ತಿಭಿರಾದಾಯ ಪಪುಃ ಕಾಮಂ ಗಣೇಶ್ವರಾಃ "

ಶಿವಪಾದೋದಕವಂ ಸ್ವೀಕರಿಸಿದನನ್ತರದಲ್ಲಿ ಅಪವಿತ್ರವೆಂದು ಶಙ್ಕೆಯಿಂದ ಯಾವನು—ಅಜ್ಞಾನದಿಂದ ಶುದ್ಧ್ಯರ್ಥವಾಗಿ ಆಚಮನವಂ ಮಾಡಿಕೊಳ್ಳುತ್ತಾನೋ, ಆತನನ್ನು ಬ್ರಹ್ಮಘಾತಕನನ್ನಾಗಿ ತಿಳಿಯಬೇಕು. ಎಂಬಲ್ಲಿ ಸಾಕ್ಷಿಯು.-

" ಶಮ್ಭೋಃ ಪಾದೋದಕಂ ಪೀತ್ವಾ ಪಶ್ಚಾದಶುಚಿಶಙ್ಕಯಾ ||
ಯ ಆಚಮತಿ ಮೋಹೇನ ತಂ ವಿನ್ದ್ಯಾದ್ಬ್ರಹ್ಮಘಾತಕಮ್ "

ಎಲೈ ವಿಷ್ಣುವೇ ! ನನ್ನ ಪಾದಗಳನ್ನು ಪ್ರಕ್ಷಾಳಿಸಿ ಆ ತೀರ್ಥವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಳ್ಳುವಂತೆ, ಅತಿಥಿಯಾದ ಜಙ್ಗಮನ ಪಾದಗಳನ್ನು ಪ್ರಕ್ಷಾಳಿಸಿ, ಆ ತೀರ್ಥವನ್ನು ಕೈಗಳಿಂದ ತಲೆಯಮೇಲೆ ಪ್ರೋಕ್ಷಿಸಿಕೊಳ್ಳಬೇಕು. ಇದೇ ರೀತಿಯಾಗಿ ಗುರುವಿನ ಪಾದೋದಕವನ್ನು ಪ್ರೋಕ್ಷಿಸಿಕೊಳ್ಳಬೇಕು. ಎಂಬಲ್ಲಿ ಸಾಕ್ಷಿಯು.—

" ಪಾದೌ ಪ್ರಕ್ಷಾಳ್ಯ ದೇವಸ್ಯ ಕರಾಭ್ಯಾಂ ಕಮಲೇಕ್ಷಣ ! ||
ಪ್ರೋಕ್ಷಯೇಚ್ಛಾತ್ಮನೋ ಮೂರ್ಧ್ನ್ಯತಿಥೇಶ್ಚ ಗುರೋಸ್ತಥಾ "

ಶಿವಪಾದೋದಕವು—ಪ್ರಮಥಶ್ರೇಷ್ಠರಿಂದ ಪಾನಮಾಡಲ್ಪಟ್ಟಿತು, ದೇವತೆ

ಗಳಲ್ಲಿ ಮುಖ್ಯರಾದವರಿಂ ಶಿರಸ್ಸಿನಿಂ ಧರಿಸಲ್ಪಟ್ಟಿತು, ವಾಲ್ಮೀಕಿಮುನಿಯಿಂದ ದಿಟ್ಟ ವಾಗಿಯೂ ಪರಿಶುದ್ಧವಾದುದೆಂದು ಹೇಳಲ್ಪಟ್ಟಿತು. ಎಂಬಲ್ಲಿ ಸಾಕ್ಷಿಯು.—

" ಪ್ರಮಥಪ್ರವರೈಃ ಪೀತಂ ಸುರಮುಖ್ಯೈಶ್ಶಿರೋಧೃತಮ್ ||
ಶುದ್ಧಂ ತತ್ವತಯಾದಿಷ್ಟಂ ವಲ್ಮೀಕಪ್ರಭವೇನ ಚ "

ಶಿವಪಾದೋದಕವನೆಂತು ಭಕ್ತಿಯಿಂ ಸ್ವೀಕರಿಸುತ್ತಾನೆಯೋ, ಹಾಗೆಯೇ ಯಾವಾಗಲೂ ಶಿವಸ್ವರೂಪರಾದ ಗುರುಜಙ್ಗಮರ ಪಾದೋದಕವನ್ನು ಸ್ವೀಕರಿಸ ಬೇಕು. ಎಂಬಲ್ಲಿ ಸಾಕ್ಷಿಯು.—

" ಪಾದೋದಕಂ ಯಥಾ ಭಕ್ತ್ಯಾ ಸ್ವೀಕರೋತಿ ಮಹೇಶಿತುಃ ||
ತಥಾ ಶಿವಾತ್ಮನೋರ್ನಿತ್ಯಂ ಗುರುಜಙ್ಗಮಯೋ ರಪಿ "

ಶುದ್ಧರೂ, ವೀರಶೈವಮಾತಾನುವರ್ತಿಗಳೂ, ಅಷ್ಟಾವರಣಸ್ವರೂಪವಂ ಬಲ್ಲ ವರೂ, ಷಟ್ಸ್ಥಲಜ್ಞಾನಸಮ್ಪನ್ನರೂ ಆದ ಶಿವಭಕ್ತರಿಂದಾಚರಿಸಲು ಯೋಗ್ಯಮಾದ ಗುರುಜಂಗಮಪಾದಪೂಜಾಕಾಲ, ತದ್ವಿಧಾನ, ತತ್ಪದೋದಕಗ್ರಹಣ ಲಕ್ಷಣವನ್ನು ಸತ್ಪುರುಷರು ತಿಳಿದಾಚರಿಸಿ, ದುಷ್ಟವಾದ ಚರ್ಯೆಗಳಂ ಬಿಟ್ಟು; ಕೃತಾರ್ಥರಾಗಲೋ ಸುಗ ನಿರೂಪಿಸುವೆನದೆಂತೆನೆ.—

ಪೂಜಕನು—ಪ್ರಾತಃಕಾಲಾಹ್ನಿಕವನ್ನು ನೆರವೇರಿಸಿ, ಮಾಧ್ಯಾಹ್ನಿಕ ಶಿವ ಪೂಜೆಯಂ ಪ್ರಾರಂಭಿಸಿದ ಸಮಯದಲ್ಲಿ ಭಕ್ತಸ್ಥಲವನ್ನು ಹೊಂದಿ, ತತ್ಸ್ಥಲೋಕ್ತ ಕ್ರಿಯಾಚರಣಾನನ್ತರದಲ್ಲಿ ಗುರುಜಙ್ಗಮರ ಪಾದಪೂಜೆಯುಂ ನೆರವೇರಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಆದೌ ಗುರುಪದಂ ಧ್ಯಾತ್ವಾ ಭೂತಿಮಾದಾಯ ಶಾಮ್ಭವೀಮ್ "
ಇತ್ಯಾರಭ್ಯ " ಪಾತ್ರೇಷು ಪೂಜಾದ್ರವ್ಯೌಘಂ ನಿಕ್ಷಿಪೇತ್ತತ್ಸಮನ್ತ್ರಕ ಮ್ || ಗುರುಮೂರ್ತಿಂ ಚರಂ ವಾಪಿ ಪೂಜಯಿತ್ವಾ ನಿರನ್ತರಮ್ ||
ಧ್ಯಾತ್ವಾ ಗುರುಂ ಸ್ವಹೃದಯೇ ಪ್ರಾಣಾಯಾಮತ್ರಯಂ ಸುಧೀಃ "
ಇತ್ಯನ್ತವಾಗಿ,

ಮತ್ತಂ, ಗುರುಜಙ್ಗಮರ ಪಾದಪೂಜೆಯೂ, ಅವರ ಪಾದೋದಕಪ್ರಸಾದ ಗ್ರಹಣವೂ ಭಕ್ತಸ್ಥಲೋಕ್ತಾಚಾರವಾದ್ದರಿಂದ ಭಕ್ತಸ್ಥಲವ್ಯತಿರಿಕ್ತವಾದ ಮಾಹೇ ಶ್ವರಸ್ಥಲ ಮೊದಲಾದೈದುಸ್ಥಲಂಗಳಲ್ಲಿ ಕ್ರಮದಿಂ ಷಡಕ್ಷರ ಮನ್ತ್ರಜಪವು, ದಶಾ ವಧಾನ ನಿರೀಕ್ಷಣವು, ಇಷ್ಟ ಪ್ರಾಣಲಿಙ್ಗಾರಾಧನೆಯು, ನೈವೇದ್ಯಸಮರ್ಪಣೆಯು, ಪ್ರಸಾದಭೋಗಸಂತೃಪ್ತಿಪೂರ್ವಕವಾಗಿ ಪ್ರಾಣಲಿಂಗೇ ನಿಪೇಶನವು ಇದೇ ಕಡೆಯಾಗಿ

ಕ್ರಿಯಾಸಮಾಪ್ತಿಯಾಗಲು, ಪುನಃ ಪೂಜಾಗಮನಸಮಧ್ಯದಲ್ಲಿ ಪ್ರಸಾದಕಾಯನಾಗುವುದರಿಂದ ಕ್ರಿಯೆಯು ಹುಟ್ಟುವುದಿಲ್ಲವಾದ್ದರಿಂದ, ಗುರುಜಙ್ಗಮಪಾದಾರ್ಚನೆಯು—ಭಕ್ತಸ್ಥಲದಲ್ಲಿರುವಾಗಲೇ ಅಚರಿಸಲ್ತಕ್ಕುದೆಂದಙ್ಗೀಕರಿಸಲ್ವೇಳ್ಕುಂ.

ಕೆಲವರು ಪೂಜಕರು—ಈ ಉಕ್ತ ಪ್ರಕಾರವನತಿಕ್ರಮಿಸಿ, ಶಾಸ್ತ್ರಾರ್ಥವಂ ಪರ್ಯಾಲೋಚಿಸದೆ, ಸದ್ಗುರುವನ್ನಾಶ್ರೈಸದೆ, ಸ್ಥಲಸಾಙ್ಕರ್ಯವನಙ್ಗೀಕರಿಸಿ, ಅಕಾಲದಲ್ಲಿ ಭಕ್ತಸ್ಥಲೋಕ್ತಮಾದ ಕ್ರಿಯೆಗೋಸ್ಕರ ಶುಕ್ತಿಯನ್ನು ರಜತವೆಂದು ಭ್ರಮಿಸುವಂತೆ, ಜಙ್ಗಮನನ್ನು ಪೂಜಿಸಿ ತೀರ್ಥವೆಂದೂ ಪ್ರಸಾದವೆಂದೂ ಭ್ರಮಿಸಿ ಸ್ವೀಕರಿಸುತ್ತಾರೆ.

ಮತ್ತಮೀ ಯುಗಾದಿಯೊಳ್ ಕೆಲವರು ಶೈವರು— ದುರಾಚಾರಗಳಲ್ಲಿ ಪ್ರವರ್ತಿಸಿ, ಅನೇಕ ಪ್ರಕಾರಗಳಿಂದ ಶಿವದ್ರೋಹವನಾಚರಿಸಿ, ಬಳಿಕ ಸಕಲಶಾಸ್ತ್ರಪಾರಂಗತನೂ, ವೇದವೇದಾನ್ತವಿಚಕ್ಷಣನೂ, ಅನ್ತರ್ಮುಖಿಯೂ, ಶಿವಭಕ್ತನೂ, ಶಾಪಾನುಗ್ರಹಸಮರ್ಥನೂ, ಮಹಾ ಪುರುಷನೂ ಆದ ಶಿವಯೋಗಿಶ್ರೇಷ್ಠನನ್ನು ದೂಷಿಸಿ ಅಪರಾಧಿಗಳಾದುದರಿಂದ, ಆ ಶಿವಯೋಗಿಯು-ಈ ದ್ರೋಹಿಗಳನ್ನು ಅತ್ಯುತ್ಕಟ ನರಕವನ್ನೈದಿಸಬೇಕೆಂದು ಯೋಚಿಸಿ, ಇವರಂ ಕುರಿತು "ಎಲೈ ಪಾಪಿಗಳಿರಾ! ನೀವು ಈ ಯುಗದಲ್ಲಿ ಕೆಲಕಾಲದ ಮೇಲೆ ವೀರಶೈವ ಮತದಲ್ಲಿ ಹುಟ್ಟಿ, ಅತ್ಯುತ್ಕಟವಾದ ಪಾಪಯೋಗ್ಯವಾದ ಕಾರ್ಯಗಳನ್ನಾಚರಿಸಿ, ಕಡೆಯಲ್ಲಿ ರೌರವನರಕವನ್ನೈದಿರಿ" ಎಂದು ಶಾಪವಂ ಕೊಟ್ಟನಾದ್ದರಿಂದ, ಆ ಶಾಪಾಗ್ನಿಯಿಂ ದಗ್ಧರೂ ಮತ್ತರೂ ಆಗಿ, ಶಿವಭಕ್ತಿವಿರಹಿತರೂ, ಅವಿದ್ಯಾವನ್ತರೂ, ಅಹಂಕಾರಿಗಳೂ, ಶಿವಾಗಮಾಮ್ನಾಯದೂಷಕರೂ, ಶಿವಾಚಾರಪರಾಙ್ಮುಖರೂ, ಕುಮಾರ್ಗಾಚಾರವರ್ತಿಗಳೂ ಆಗಿ, ಪಾಪಿಗಳಿಂ ನಿರ್ಮಿತವಾದ ಕುವಚನ ರಚನೆಗಳಿಂ ಮತಿಗೆಟ್ಟು, ಪುಣ್ಯಶ್ಲೋಕರಾದ ಮಹಾತ್ಮರ ಆಚಾರಕ್ರಮದಲ್ಲಿ ಪುಗದೆ, ಮತಪ್ರವರ್ತಕರಾದ ಮಹಾಪುರುಷರಿಂದ ರಚಿತವಾದ ಶಿವಾಜ್ಞಾರೂಪವಾದ ಸಚ್ಛಾಸ್ತ್ರಂಗಳಂ ನಿರಾಕರಿಸಿ, ಶಿವಾಗಮೋಕ್ತವಾದ ಆಚಾರಗಳಲ್ಲೊಂದನ್ನೂ ಅನುಸರಿಸದೆ, ಸಕಲ ದೇವತೆಗಳಿಗಿಂತಲೂ ಸಮಸ್ತ ಋಷಿಗಳಿಗಿಂತಲೂ ತಾವೇ ಅಧಿಕರೆಂದು ತಿಳಿದು, ಲೋಕದಲ್ಲಿ ಪಾಮರ ಜನರಿಗೆ ಶಾಸ್ತ್ರದಲ್ಲಿ ಅವಿಶ್ವಾಸವನ್ನು ಹುಟ್ಟಿಸಿ, ಸ್ವಕೀಯ ಪಾದಪ್ರಕ್ಷಾಲನೋದಕಪಾನದಿಂದಲೂ, ತಮ್ಮ ಪಾದಪೂಜೆಯಿಂದಲೂ, ಸ್ವಕೀಯೋಚ್ಛಿಷ್ಟಾನ್ನಭೋಜನದಿಂದಲೂ ಸಕಲವೂ ದೊರಕುವುದೆಂದೂ, ಸ್ವಪಾದಪ್ರಕ್ಷಾಲನೋದಕದಿಂದಲೇ ಸಕಲವೂ ಪವಿತ್ರವಪ್ಪುದೆಂದೂ, ತಮ್ಮ ಪಾದವನ್ನು ಸಕಲದೇವತಾಜನನಸ್ಥಾನ

ನವೆಂದೂ ಬೋಧಿಸಿ, ಆ ಜನರನ್ನು ಈ ದುರಾಚಾರಗಳಲ್ಲಿ ಪ್ರವರ್ತಿಸಮಾಡಿಸಲೋಸುಗ "ಅಙ್ಗಲಿಙ್ಗೇ ಜ್ಞಾನರೂಪಸ್ಸತೀ ಜ್ಞೇಯಸ್ತ್ವಿವಃ ಪತಿಃ"—"ಸತೀ ಚಾಹಂ ಪತಿರ್ಲಿಙ್ಗಂ ಹೃದಿ ಯುಕ್ತಸ್ಸ್ವಯಂ ಪ್ರಭುಃ" ಎಂಬ ಶರಣಸ್ಥಲೋಕ್ತವಚನಗಳಿಂದ ಸತಿಪತಿನ್ಯಾಯಮುಂಟಾಗಿರುವುದರಿಂದ, ಸತಿಯಾದವಳು—ತನ್ನ ಪಾದೋದಕವನ್ನು ತನ್ನ ಪತಿಗೆ ಬಲಾತ್ಕಾರದಿಂ ಕೊಟ್ಟಂತೆ, ಸ್ವಕೀಯ ಪಾದಪ್ರಕ್ಷಾಳನೋದಕವನ್ನು ತಮ್ಮಿಷ್ಟಲಿಙ್ಗಕ್ಕೆರೆದು, ತಾವೂ ಅದನ್ನು ಕುಡಿದು, ತಮ್ಮುಚ್ಛಿಷ್ಟವನ್ನೇ ತಮ್ಮ ಲಿಙ್ಗಕ್ಕೆ ಕೊಟ್ಟು, ನಿತ್ಯದಲ್ಲಿಯೂ ಸ್ವಕೀಯ ಪಾದಪ್ರಕ್ಷಾಳನೋದಕಸ್ವೀಕಾರ ನಿಯಮವನ್ನನುಸರಿಸಿ, ವರ್ಣಿಸಲಶಕ್ಯವೂ ಸತ್ಪುರುಷರಿಂ ನಿರಾಕರಿಸಲು ಯೋಗ್ಯವೂ ಆದ ಕುಮಾರ್ಗದಲ್ಲಿ ಪ್ರವರ್ತಿಸುತ್ತಾರೆ. ಅಚೇತನಗಳಿಂ ಚೇತನಪ್ರಾಣಿಗಳಧಿಕರು, ಅವರಿಂ ಮನುಷ್ಯರು, ಅವರಿಂ ದ್ವಿಜರು, ಅವರಿಂ ಬ್ರಾಹ್ಮಣರು, ಅವರಿಂ ಗನ್ಧರ್ವರು, ಅವರಿಂ ದೇವಗನ್ಧರ್ವರು, ಅವರಿಂ ಜ್ಞಾನದೇವತೆಗಳು, ಅವರಿಂ ಸುರಪತಿಯು, ಅವನಿಂ ಬೃಹಸ್ಪತಿಯು, ಅವನಿಂ ಪ್ರಜಾಪತಿಯು, ಅವನಿಂ ಬ್ರಹ್ಮನು, ಅವನಿಂ ವಿಷ್ಣುವು, ಅವನಿಂ ರುದ್ರನು, ಅವನಿಂ ಸಾಮ್ಬಶಿವನು, ಅವನಿಂ ನಿತ್ಯನೂ, ನಿರ್ಮಲನೂ, ನಿರಾವರಣನೂ, ನಿರಾಮಯನೂ, ನಿರ್ಗುಣನೂ, ನಿಷ್ಕರ್ಮನೂ, ನಿಷ್ಕಲನೂ, ನಿಷ್ಪ್ರಪಞ್ಚನೂ, ನಿರಘನೂ, ನಿರ್ಲೇಪನೂ, ನಿರ್ನಾಮನೂ, ನಿರವದ್ಯನೂ, ನಿಸ್ಸಙ್ಗನೂ, ನಿರ್ದ್ವನ್ದ್ವನೂ, ನಿರಾಕುಳನೂ, ನಿರಾತಙ್ಕನೂ, ನಿಷ್ಕಮ್ಪನೂ, ನಿರಾಶ್ರಯನೂ, ನಿರ್ವಿಶೇಷನೂ, ನಿರವಧಿಕನೂ, ನಿರುಪಮಾನನೂ, ನಿರತಿಶಯನೂ, ನಿತ್ಯಮುಕ್ತನೂ, ನಿತ್ಯಾನನ್ದಸ್ವರೂಪನೂ, ಪರಾಪರ ಮುಕ್ತಿಪ್ರದನೂ, ಸರ್ವೋತ್ತಮನೂ ಆದ ಪರಶಿವಸ್ವಾಮಿಯು—ಅಧಿಕನು." ಎಂದು ಪ್ರಸಿದ್ಧವಾಗಿದ್ದರೂ, ಆ ಶಿವನನ್ನು ಸರ್ವಶ್ರೇಷ್ಠನನ್ನಾಗಿ ತಿಳಿಯದೆ, ಆ ಶಿವಲಿಙ್ಗವನ್ನು ತನ್ನಂಗದಲ್ಲಿ ಸರ್ವಕಾಲದಲ್ಲೂ ಧರಿಸಿ ಪೂಜಿಸಿ ವನ್ದಿಸುತ್ತಿದ್ದಾಗ್ಯೂ, ಆ ಶಿವಮೂರ್ತಿಗಿಂತ ತಾವೇ ಅಧಿಕರೆಂದು ತಿಳಿದು, ಆ ಲಿಙ್ಗತೀರ್ಥವಂ ಸೇವಿಸುವುದರಲ್ಲಿ ಅಪೇಕ್ಷೆಯಿಲ್ಲದವರಾಗಿ, ಸ್ವಪಾದೋದಕವನ್ನು ಆ ಲಿಙ್ಗಕ್ಕೆರೆದು ಸೇವಿಸುವುದರಲ್ಲಿಯೇ ಆಸಕ್ತಿಯುಳ್ಳವರಾಗಿರುತ್ತಾರೆ.

"ಈ ಕಲಿಯುಗದಲ್ಲಿ ಬಹುಜನ ಯತಿಗಳು—ಶುಭ್ರವಾದ ದನ್ತಗಳುಳ್ಳವರಾಗಿ, ಇನ್ದ್ರಿಯವಶರಾಗಿ, ಬೋಳತಲೆಯುಳ್ಳವರಾಗಿ, ಕಾಷಾಯವಸ್ತ್ರಧಾರಿಗಳಾಗಿ ಶೂದ್ರಾಚಾರಗಳನ್ನು ಆಚರಿಸುವರು" ಎಂಬರ್ಥವಂ ಹೇಳತಕ್ಕ "ಶುಕ್ಲದನ್ತಾಜಿತಾಕ್ಷಾಶ್ಚ ಮುಣ್ಡಾಃ ಕಾಷಾಯಧಾರಿಣಃ ॥ ಶೂದ್ರಧರ್ಮಂ ಚರಿಷ್ಯನ್ತಿ ಬಹ

ವೋಸ್ಮಿನ್ಕಲೌ ಯುಗೇ'' ಎಂಬ ಲಿಙ್ಗಪುರಾಣ ವಚನಕ್ಕೆ ವಿಷಯರಾಗಿರ್ಪರು. '' ಕೆಲವರು ಯತಿಗಳು—ದುರ್ಭೋಜನ ದುರಾಲಾಪ ದುಷ್ಪ್ರತಿಗ್ರಹಗಳಲ್ಲಾಸಕ್ತರಾಗಿ, ದ್ರವ್ಯಾಶೆಯಿಂದ ಮಠಾಧಿಕಾರವಂ ಮಾಡುವರು. ಮತ್ತಂ ಗ್ರಾಮಾಧಿಕಾರದಲ್ಲಾಸಕ್ತರಾಗಿ, ಮನ್ತ್ರ ಯನ್ತ್ರ ತನ್ತ್ರಗಳಂ ಕಲಿತವರಾಗಿ, ಮುಂಡೆಯರಿಗುಪದೇಶವಂ ಮಾಡುವರಾಗಿ, ಅವರ ಕೂಡ ಸಂಭಾಷಣ ಮಾಡುವುದರಲ್ಲಾಸಕ್ತರಾಗಿ, ಸರ್ವರಿಗೂ ಉಪದೇಶ ಮಾಡುವವರಾಗಿ, ತಾವು ವೈರಾಗ್ಯವಿಲ್ಲದವರಾಗಿ; ಅನ್ಯರಿಗೆ ವೈರಾಗ್ಯವನ್ನು ಉಪದೇಶಮಾಡುತ್ತಾ, ಹಣದಾಸೆಯಿಂದ ಕಂಡಕಂಡವರಂ ಯಾಚಿಸುತ್ತಾ, ಆಸೆಯೆಂಬ ಪಿಶಾಚದಿಂ ಹಿಡಿಯಲ್ಪಟ್ಟವರಾಗಿ; ಗಮ್ಯಾಗಮ್ಯ ಪ್ರದೇಶಂಗಳನ್ನು ವಿಚಾರಿಸದೆ ಸರ್ವತ್ರ ಸಂಚರಿಸುವವರಾಗಿ, , ಮತ್ತಂ ಪ್ರತಿದಿನದಲ್ಲೂ ದಧಿಘೃತ ಶಾಲ್ಯೋದನಗಳಂ ಸೇವಿಸಿ ಯೌವನದ ಕೊಬ್ಬಂ ತಡೆಯಲಾರದೆ ಮತ್ತರಾಗಿ, ಮನಸ್ಸು ಬಂದಂತೆ ಪ್ರವರ್ತಿಸಿ, ಅತ್ಯನ್ತವಾಗಿ ಪಾಪವಂ ಪಡೆಯುವರು. ಕೆಲವರು ಯತಿಗಳು ಕಾಷಾಯಾಂಬರಧಾರಿಗಳಾದಾಗ್ಯೂ ವಿಷಯಲಂಪಟರಾಗಿ ಶಿಶ್ನೋದರಪರರಾಗುವರು. । ಕೆಲವರು ಮುಂಡನವನ್ನು ಹೊಂದಿ, ಲೋಕವಂಚಕರಾಗಿ ಇರುವರು. ಕೆಲವರು ವೇದಶಾಸ್ತ್ರಂಗಳಲ್ಲಿ ಸಿದ್ಧಾನ್ತಿತವಾದ ಪಾಪಪುಣ್ಯಗಳನ್ನೂ ಪರಲೋಕವನ್ನೂ ಸುಳ್ಳೆಂದು ಹೇಳುತ್ತಾ ನಾಸ್ತಿಕರೇ ಆಗಿ, ಜನರನ್ನು ವಂಚಿಸತಕ್ಕವರಾಗಿ ಇರುವರು. ಕೆಲವರು ವ್ಯರ್ಥವಾಗಿ ಯತಿವೇಷವಂ ಧರಿಸಿಕೊಂಡು, ರಾಜಸೇವಾದಿಗಳನ್ನು ಮಾಡುವರು. ಆದ್ದರಿಂದ ಸತ್ಪುರುಷನಾದವನು ಅವರನ್ನು ನೋಡಬಾರದು, ನೋಡಿದೊಡೆ ನರಕವನ್ನೇ ಹೊಂದುವರು'' ಎಂಬರ್ಥವಂ ಬೋಧಿಸುವ'' ದುರ್ಭೋಜನ ದುರಾಲಾಪ ದುಷ್ಪ್ರತಿಗ್ರಹತತ್ಪರಾಃ॥ ಮಾಠಾಪತ್ಯಙ್ಚ ಯತಯಃ ಕರಿಷ್ಯನ್ತಿ ಧನಾಶಯಾ ॥ ಗ್ರಾಮಣ್ಯನಿರತಾ ಯನ್ತ್ರ ಮನ್ತ್ರ ತನ್ತ್ರ ವಿಶಾರದಾಃ ॥ ರಣ್ಡೋಪದೇಶನಿರತಾಸ್ತತ್ಸಮ್ಭಾಷಣತತ್ಪರಾಃ ॥ ಸರ್ವೇಷಾಮುಪದೇಷ್ಟಾರೋ ವೈರಾಗ್ಯೇಣ ವಿವರ್ಜಿತಾಃ ॥ ಯಾಚಕಾಶ್ಚ ಭವಿಷ್ಯನ್ತಿ ಯತಯಃ ಕಾಙ್ಚನಾಶಯಾ ॥ ಸರ್ವತ್ರ ವಿಚರಿಷ್ಯನ್ತಿ ತೃಷ್ಣಯಾ ನಗರಾದಿಷು ॥ ವಯಸಾ ಪಯಸಾ ದಧ್ನಾ ಕ್ಷೀರಶಾಲ್ಯೋದನೇನ ಚ ॥ ಯತಿರೇತೈರನುದಿನಂ ಪ್ರಮತ್ತಃ ಪತಿತೋ ಭವೇತ್ ॥ ಕಾಷಾಯಧಾರಿಣಃ ಕೇಚಿಲ್ಲಮ್ಪಟಾ ವಿಷಯೇಷ್ವಿಹ ॥ ಶಿಶ್ನೋದರಪರಾಶ್ಚಾನ್ಯೇ ಮುಣ್ಡಿನೋ ಲೋಕವಙ್ಚಕಾಃ ॥ ಕಪಟಾ ನಾಸ್ತಿಕಾಃ ಕೇ ಚಿದ್ವೃಥಾ ವೈ ವೇಷಧಾರಿಣಃ ॥ ರಾಜಸೇವಾಂ ಪ್ರಕುರ್ವನ್ತಿ........'' ಇತ್ಯಾದಿ ಸ್ಕನ್ದಾದಿತ್ಯ ಪುರಾಣಾದಿ ವಚನಾರ್ಥಗಳಿಗೆ ವಿಷಯರಾಗಿರುತ್ತಾರೆ.

ಶಾಸ್ತ್ರಪ್ರಮಾಣವಿಲ್ಲದೆ; ಅಶಾಸ್ತ್ರೀಯವೂ, ಪಾಪಹೇತುವೂ ಆಗಿರುವ, ತಮ್ಮಿಂದಾಚರಿಸಲ್ಪಡುವ, ದುರಾಚಾರಗಳು—ಶಿಷ್ಟಾಚಾರಗಳೆಂದೂ, ಇವುಗಳನ್ನು ತಮ್ಮ ಗುರುಗಳು ಅನುಸರಿಸಿದ್ದರೆಂದೂ ಹೇಳುತ್ತಾ, ತಮ್ಮ ಗುರುಗಳಿಗೆ ಅಜ್ಞತ್ವವಂ ಪ್ರಕಾಶಪಡಿಸುವ ಗುರುದ್ರೋಹಿಗಳು— "ಯಶ್ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾತರಃ || ನಾಸೌ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್" ಎಂಬ ಗೀತೋಕ್ತಿಗೆ ಸಾರ್ಥಕತೆಯನ್ನುಂಟುಮಾಡುತ್ತಾರೆ.

ಶಿವನು—ಈ ಕಲಿಯುಗದಲ್ಲಿ ಈ ಪ್ರಕಾರವಾಗಿ ಶಿವದ್ರೋಹಿಗಳನ್ನು ಸೃಷ್ಟಿಸಿ, ಅವರಿಂದ ಅಸಜ್ಜಾತ್ಯಕಗಳಾದ ದುಷ್ಕರ್ಮಗಳಂ ಮಾಡಿಸಿ, ಮಹದ್ದುಃಖಪ್ರದಮಾದ ನರಕವನ್ನು ಐದಿಸುವನು. ಎಂಬಂಶವು—ಆದಿತ್ಯಪುರಾಣಾನ್ತರ್ಗತಮಾದ ಶಿವಸಹಸ್ರನಾಮಾವಳಿಯಲ್ಲಿ (೭೬೨) ನೆಯ "ತಿಷ್ಯಾಯನಮಃ" ಎಂಬ ನಾಮದ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿರುವುದರಿಂದ ನಿಶ್ಚಯವೆಂದು ತಿಳಿಯಲ್ತಕ್ಕುದು.

ಮತ್ತಂ, ಈ ದುರಾಚಾರವು—ಚತುಷ್ಷಷ್ಟಿಶೀಲಾಚಾರಧುರನ್ಧರನಾದ ಪಾಲ್ಕುರಿಕೆ ಸೋಮನಾಥನಿಂ ರಚಿತಮಾದ 'ಬಸವರಾಜೀಯು' ಎಂಬ ಗ್ರನ್ಥದಲ್ಲಿಯೂ, ಶಿವತತ್ವಕಲಾನಿಧಿಯಾದ ಮಲ್ಲಪ್ಪಾರ್ಯನಿಂ ರಚಿತಮಾದ 'ಶಿವಜ್ಞಾನದೀಪಿಕೆ' ಎಂಬ ಗ್ರನ್ಥದಲ್ಲಿಯೂ, ಸಮಸ್ತ ತತ್ವವೇತ್ತನಾದ ಪದ್ಮರಾಜನಿಂ ಕೃತಮಾದ 'ಸಾನನ್ದಚರಿತೆ' ಎಂಬ ಗ್ರನ್ಥದಲ್ಲಿಯೂ, ಸಕಲ ಶೈವಾಗಮಾಭಿಜ್ಞನಾದ ಜ್ಯೋತಿರ್ನಾಥನಿಂ ವಿರಚಿತಮಾದ 'ಶೈವರತ್ನಾಕರ' ಎಂಬ ಗ್ರನ್ಥದಲ್ಲಿಯೂ, ಜಗದಾರಾಧ್ಯ ನಾಗೇಶನಿಂ ಕಲಿತಮಾದ 'ಶಿವಜ್ಞಾನಸಮುಚ್ಚಯ' ವೆಂಬ ಗ್ರನ್ಥದಲ್ಲಿಯೂ, ನೀಲಕಣ್ಠನಾಗನಾಥಾಖ್ಯದೇಶಿಕನಿಂ ರಚಿತಮಾದ 'ವೀರಮಾಹೇಶ್ವರಾಚಾರಸಙ್ಗ್ರಹ' ಎಂಬ ಗ್ರನ್ಥದಲ್ಲಿಯೂ, ಮತ್ತಂ, ಶ್ರೀ ವೀರಶೈವಮತಸ್ಥಾಪನಾಚಾರ್ಯನಾದ ಜಗದ್ಗುರು ರೇಣುಕಾಚಾರ್ಯನಿಂದುಕ್ತಮಾದಂತೆ ಶಿವಯೋಗಿಯಿಂ ರಚಿತಮಾದ ರೇಣುಕಾಗಸ್ತ್ಯಸಂವಾದರೂಪವಾದ 'ಸಿದ್ಧಾನ್ತಶಿಖಾಮಣಿ' ಎಂಬ ಗ್ರನ್ಥದಲ್ಲಿಯೂ ಹೇಳಲ್ಪಡದಿರುವುದರಿಂದ ಸಾರಾಸಾರ ವಿಚಾರ ತತ್ಪರರಾದ ಸತ್ಪುರುಷರಿಂದನಾದರಿಸಲ್ತಕ್ಕುದು ಎಂಬುದೇ ಸಿದ್ಧಮಕ್ಕುಂ.

ಆದರೆ, ಗುರುಜಙ್ಗಮರ ಪಾದಪೂಜೆಯಂ ಮಾಡಲು ವಿಧಾನವನ್ನೂ, ಕಾಲವನ್ನೂ, ತತ್ಪಾದೋದಕಸ್ವೀಕಾರ ಕ್ರಮವನ್ನೂ, ವೀರಶೈವಶಾಸ್ತ್ರತತ್ವಜ್ಞರೊಡಂಬಡುವಂತೆ ನಿರೂಪಿಸುವೆನದೆಂತೆನೆ.—

" ಏಕಮೂರ್ತಿಸ್ತ್ರಯೋ ಭಾಗಾಃ ಗುರುರ್ಲಿಙ್ಗಞ್ಚ ಜಙ್ಗಮಃ ॥ ಜಙ್ಗಮ ಶ್ಚ ಗುರುರ್ಲಿಙ್ಗಂ ತ್ರಿವಿಧಂ ತ್ವೇಕಮುಚ್ಯತೇ " —" ಏಕಏವ ಶಿವಸ್ಸಾಕ್ಷಾತ್ಸ ರ್ವಾನುಗ್ರಹಕಾರಕಃ ॥ ಗುರು ಜಙ್ಗಮಲಿಙ್ಗಾತ್ಮಾ ವರ್ತತೇ ಭುಕ್ತಿಮುಕ್ತಿದಃ" ಎಂಬಾಗಮ ಪ್ರಮಾಣವಚನಂಗಳು—ವೇದಪ್ರಸಿದ್ಧನೂ, ಸರ್ವಾನುಗ್ರಹಕರ್ತನೂ, ಸತ್ಯಜ್ಞಾನಾನನ್ದಮಯನೂ ಆದ ಶಿವನೊಬ್ಬನೇ ಗುರು ಲಿಙ್ಗ ಜಙ್ಗಮಸ್ವರೂಪನಾ ಗಿರುತ್ತಾನೆ. ಎಂದು ಹೇಳಿರುವುದರಿಂದ ಶಿವ ಗುರು ಚರಮೂರ್ತಿಗಳಿಗೆ ಅಭೇದಭಾವ ನೆಯಂ ಮಾಡಬೇಕೆಂಬುದು ಸಿದ್ಧಮಕ್ಕುಂ.

" ಯಥಾದೇವೇ ಜಗನ್ನಾಥೇ ಸರ್ವಾನುಗ್ರಹಕಾರಕೇ ॥ ತಥಾಗುರುವರೇ ಕುರ್ಯಾದುಪಚಾರಾನ್ನಿನೇದಿನೇ "ಎಂದಿರುವುದರಿಂದ ಸರ್ವಜಗನ್ನಾಯಕನೂ, ಸರ್ವಾ ನುಗ್ರಾಹಕನೂ ಆದ ಶಿವನಲ್ಲಿ ಉಪಚಾರಂಗಳಂ ಮಾಡುವಂತೆ ಗುರುವಿನಲ್ಲಿಯೂ ಭಕ್ತ್ಯಾದ್ಯುಪಚಾರಂಗಳಂ ಮಾಡಬೇಕೆಂದೂ, " ಯಥಾ ಗುರೌ ಯಥಾ ಲಿಂಗೇ ಭಕ್ತಿಮಾನ್ಪರಿವರ್ತತೇ ॥ ಜಙ್ಗಮೇ ಚ ತಥಾ ನಿತ್ಯಂ ಭಕ್ತಿಂ ಕುರ್ಯಾದ್ವಿಚಕ್ಷಣಃ" ಎಂದಿರುವುದರಿಂದ ವಿಚಕ್ಷಣನಾದ ಶಿವಭಕ್ತನು-ಗುರುವಿನಲ್ಲಿಯೂ, ಲಿಙ್ಗದಲ್ಲಿಯೂ ಹ್ಯಾಗೆ ಭಕ್ತಿಯುಳ್ಳವನಾಗಿರುತ್ತಾನೋ, ಹಾಗೆ ಜಙ್ಗಮನಲ್ಲಿಯೂ ಭಕ್ತಿಯಂ ಮಾಡಬೇಕೆಂದೂ, " ಶಿವಯೋಗೀ ಶಿವಸ್ಸಾಕ್ಷಾದಿತಿ ಕೈಙ್ಕರ್ಯಭಕ್ತಿತಃ ॥ ಪೂಜ ಯೇದಾದರೇಣೈವ ಯಥಾ ಲಿಙ್ಗಂ ಯಥಾ ಗುರುಮ್ " ಎಂದಿರುವುದರಿಂದ ಶಿವ ಲಿಙ್ಗಮೂರ್ತಿಯನ್ನೂ ಗುರುವನ್ನೂ ಹ್ಯಾಗೆ ಪೂಜಿಸತಕ್ಕದ್ದೋ, ಹಾಗೆ ಶಿವಯೋಗಿ ಯಾದ ಜಙ್ಗಮನನ್ನು ಪ್ರತ್ಯಕ್ಷಶಿವಭಾವನೆಯಿಂದ ಭಕ್ತಿಯಿಂ ಪೂಜಿಸಬೇಕೆಂದೂ ಸಿದ್ಧಮಾಗಿರ್ಪುದು.

ಪೂರ್ವೋಕ್ತವಚನಗಳ ಅರ್ಥವಂ ಪರ್ಯಾಲೋಚಿಸುವುದರಿಂದ ಶಿವ ಗುರು ಜಙ್ಗಮಾರ್ಚನೆಯು ಒಂದೇ ಪ್ರಕಾರವೆಂದು ತಿಳಿದು ಬರುವುದರಿಂದ ಶಿವಾಭೇದಭಾ ವನೆಯಿಂದ ಗುರು ಜಙ್ಗಮ ಪಾದಪೂಜೆಯಂ ಮಾಡಬೇಕೆಂಬಲ್ಲಿ ತದ್ವಿಧಾನವಂ ಸಂ ಕ್ಷೇಪತಃ ಸೂಚಿಸುವೆನದೆಂತೆನೆ.—

ಪೂಜಕನು—ಪ್ರಾತಃಕಾಲದಲ್ಲಿ ಕರ್ತವ್ಯವಾದ ಇಷ್ಟಲಿಙ್ಗ ಪೂಜೆಯಂ ಮು ಗಿಸಿಕೊಂಡು, ಮಧ್ಯಾಹ್ನದಲ್ಲಿ ಲಿಙ್ಗಪೂಜೆಯಂ ನೆರವೇರಿಸುವ ಸಮಯಕ್ಕಿಂತ ಪೂ ರ್ವದಲ್ಲಿ ಭಕ್ತಸ್ಥಲೋಕ್ತವಾದ ಕ್ರಿಯೆಗಳನ್ನಾಚರಿಸಿ, ಮಾಹೇಶ್ವರಸ್ಥಲಾಚಾರಂಗಳ ನ್ನಾಚರಿಸುವುದಕ್ಕೆ ಪೂರ್ವವೇ ಗುರುಜಙ್ಗಮಾರ್ಚನೆಗೆ ಕಾಲವಾದುದರಿಂದ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಙ್ಗಸ್ಥಲೋಕ್ತ ಕ್ರಿಯೆಗಳಂ ಮುಗಿಸಿ, ಶರಣಸ್ಥಲ

ದಲ್ಲಿರುವ ಪೂಜ್ಯನ ಸಮೀಪವನ್ನು ಹೊಂದಿ, ಆತನು—ಗುರುವಾಗಿದ್ದಲ್ಲಿ; “ಶ್ರೀ
ಮದ್ರುದ್ರನಿಟಿಲಲೋಚನಜ್ವಲಜ್ಜ್ವಲಾದಗ್ಧ ಪುನರ್ಜೀವಿತ ಮದನಪ್ರಜ್ವಲಿತ ಬಡ
ಬಾನಲಸನ್ತಾಪಿತ ವಿಷಯಸಙ್ಗಪ್ರಚುರ ತರ ತರಙ್ಗ ಸಙ್ಗ ಮೋಹಾವರ್ತ ದುಸ್ತರ
ಸಂಸಾರ ಘೋರಾರ್ಣವ ತಾರಣ ಪ್ಲವರೂಪ ಶಿವಜ್ಞಾನಪ್ರದ ಲೋಭಪಞ್ಚೇ
ನ್ದ್ರಿಯಾರಾತಿ ಮೋಹಪಿಶಾಚ ಕ್ರೋಧವ್ಯಾಘ್ರ ಮಮತಾಹಿ ಕನ್ಯಾ ಮದನ
ಚೋರ ಮದಾನ್ಧಕಾರ ತಾಪತ್ರಯಗರ್ತ ವಿಷಯಕಣ್ಟಕಾಸೂಯಾವಿಷಲತಾಹ
ಙ್ಕಾರ ವಿಷಪ್ರದಾದಿ ಮಹದುಪದ್ರವವಿಶಿಷ್ಟಸಂಸಾರಕಾನ್ತಾರಭೇದನಕುಠಾರ ಶಿವ
ಜ್ಞಾನಪ್ರದಾಯಕ ದೀಕ್ಷಾಗುರೋ! ಶಿಕ್ಷಾದೇಶಿಕ! ಭವದೀಯ ಶ್ರೀಮಚ್ಚರ
ಣಾರಾಧನಾರ್ಥಂ ಆಜ್ಞಾ ದೀಯತಾಮ್” ಎಂದು ವಿಜ್ಞಾಪಿಸಿ, ಸಾಷ್ಟಾಙ್ಗಪ್ರ
ಣಾಮವಂ ಮಾಡಬೇಕು. ಜಙ್ಗಮನನ್ನು “ಸರ್ವಲೋಕೋಪಕಾರಾಯ ಯೋ
ದೇವಃ ಪರಮೇಶ್ವರಃ || ಚರತ್ಯತಿಥಿರೂಪೇಣ ನಮಸ್ತೇ ಜಙ್ಗಮಾತ್ಮನೇ” ಎಂದು
ಸಾಷ್ಟಾಙ್ಗಪ್ರಣಾಮವಂ ಗೈದು, ಆ ಪೂಜ್ಯನ ಮುಂದುಗಡೆ ಆಸನದಲ್ಲಿ ಕುಳಿತು,
ಆತನ ಪಾದಂಗಳಂ ಪೂಜಿಸಬೇಕು.

ಪಾದಪೂಜೆಯಂ ಮಾಡುವ ಸನ್ದರ್ಭದಲ್ಲಿ ಕೆಲವರು ವಿತಂಡಾವಾದಿಗಳು
ಪಾತ್ರದಲ್ಲುದಕವನಿರಿಸಿಕೊಂಡು, ಪ್ರಥಮದಲ್ಲಿ ಆ ಪಾತ್ರೆಗೆ ಆ ಪಾದತಲವಂ
ಸಮ್ಮಾರ್ಜಿಸಿ, ಬಳಿಕ ಆ ಸಮ್ಮಾರ್ಜನೋದಕದಿಂದಲೇ ಪಾದದ್ವಯದಙ್ಗುಷ್ಠದ್ವ
ಯವಂ ಸಮ್ಮಾರ್ಜಿಸಿ, ಬಳಿಕ ಆ ಪಾತ್ರದಲ್ಲಾ ಉದಕದಿಂದಲೇ ಪಾದದ್ವಯದ
ಅಙ್ಗುಷ್ಠಾದಿಕನಿಷ್ಠಾನ್ತವಾಗಿ ಆ ಪಾತ್ರೆಗೆ ಸಮ್ಮಾರ್ಜಿಸಿ, ಪುನಃ ಆ ಉದಕದಿಂದ
ಲೇ ಪಾದದ್ವಯದಙ್ಗುಷ್ಠಕ್ಕೆ ಅಭಿಷೇಕವಂ ಮಾಡಿ, ಅದನ್ನು ತೀರ್ಥವನ್ನಾಗಿ ಭಾ
ವಿಸಿ, ಸ್ವೀಕರಿಸುತ್ತಾರೆ.

ಈ ದುರಾಚಾರವು—ಪಾದಪ್ರಕ್ಷಾಳನೋದಕದಿಂ ಮುಖಪ್ರಕ್ಷಾಳನಂ ಗೈ
ದು, ಆ ಪಾದಮುಖಪ್ರಕ್ಷಾಳನೋಭಯೋದಕದಿಂ ಗಂಡೂಷಿಸಿ, ಪಾದಪ್ರಕ್ಷಾಳನ,
ಮುಖಪ್ರಕ್ಷಾಳನ, ಗಂಡೂಷ ಈ ಮೂರುಪ್ರಕಾರದ ಸಂಸ್ಕಾರವುಳ್ಳ ಉದಕವಂ
ಪಾನಮಾಡಿದ ಹಾಗೆ ಆಗುತ್ತದೆ.

ಇಂತಪ್ಪ ದುರಾಚಾರವು—ಲೋಕವಿರುದ್ಧವೂ, ಅಶಾಸ್ತ್ರೀಯವೂ, ದೋಷ
ಭಾಜನವೂ ಆಗಿರುತ್ತದೆ ಎಂಬಂಶವು—ಕರತಲಾಮಲಕದಂತೆ, ಸ್ಫುಟವಾಗಿರುವುದ
ರಿಂದ, ಇಂತಪ್ಪ ದುರಾಚಾರಗಳಿಂ ವಿಶಿಷ್ಟವಾದ ಪಾಪಕೃತ್ಯವಂ ಸತ್ಪುರುಷರು
ಸರ್ವಥಾ ನಿರಾಕರಿಸತಕ್ಕವು ಎಂಬಲ್ಲಿ ಸಂಶಯವಿಲ್ಲ. ಈ ವಿಷಯದಲ್ಲಿ ಹೇಳಬೇಕಾ

ದುದು ಬಹಳವಾಗಿದ್ದಾಗ್ಯೂ ಗ್ರನ್ಥವಿಸ್ತರಭೀತಿಯಿಂ ವಿರಮಿಸಿ, ಪ್ರಕೃತ ಸಙ್ಗತಿಯ ನ್ನನುಸರಿಸುವೆವು.

ಭಕ್ತಿಯಿಂ ನಮಿಸಿ ಆಸನದಲ್ಲಿ ಕುಳ್ಳಿರ್ದಾ ಪೂಜಕನು—ಶುದ್ಧೋದಕದಿಂ ಹಸ್ತಪ್ರಕ್ಷಾಳನಂ ಗೈದು, ಪ್ರಾಣಾಯಾಮತ್ರಯವಂ ಮಾಡಿ, "ಉಪಾತ್ತದುರಿತ ಕ್ಷಯದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಂ ಜಙ್ಗಮಪಾದಪೂಜಾಂ ಕರಿಷ್ಯೇ" ಎಂದು ಸಙ್ಕಲ್ಪಿಸಿ, ಆ ಚರಮೂರ್ತಿಯ ಪಾಡದ್ವಯವಂ ತನ್ನ ವಾಮಹಸ್ತತಲದಲ್ಲಿ ರಿಸಿಕೊಂಡು, "ಚರಮೂರ್ತಿಶ್ಶಿವಸ್ಸಾಕ್ಷಾತ್ಪಾಪಮುಕ್ತಃ ಪರಶ್ಶಿವಃ ‖ ವಸನ್ತಿ ಪಾದಯುಗ್ಮೇ ತು ತ್ರೈಲೋಕ್ಯಂ ಸಚರಾಚರಮ್ ‖ ಅಙ್ಗುಷ್ಠಾಗ್ರೇ ಹ್ಯಷ್ಟಷಷ್ಟಿತೀರ್ಥಾನಿ ನಿವಸನ್ತಿ ಚ ‖ ನಕ್ಷತ್ರಗ್ರಹಬೃನ್ದಾನಿ ಗುಲ್ಫೇ ತಸ್ಯ ವಸನ್ತಿ ವೈ ‖ ಸಪ್ತಾಬ್ಧಯಶ್ಚ ಪಾದಾಧಸ್ತದೂರ್ಧ್ವೇ ಕುಲಪರ್ವತಾಃ ‖ ಜಙ್ಘಯೋರ್ವಸತೇ ನಿತ್ಯಂ ಷಟ್ತ್ರಿಂಶತ್ತತ್ವಬೃನ್ದಕಮ್" ಎಂದು ನಮಸ್ಕರಿಸಿ, ಸ್ನಾನಾದ್ಯುಪಚಾರಗಳಂ ಮಾಡಿ, "ಪುಷ್ಪೈರ್ನಾನಾವಿಧೈಃ ಸ್ತೋತ್ರೈರ್ಮಾಲ್ಯೈಶ್ಚೈವ ಸುಗನ್ಧಿಭಿಃ ‖ ಶ್ರೀ ಗುರೋರ್ವಿಗ್ರಹಸ್ಯಾಸ್ಯ ಸನ್ಧೌ ಸನ್ಧೌ ಪ್ರಪೂಜಯೇತ್" ಎಂಬ ವಚನಪ್ರಮಾಣಾನುಸಾರವಾಗಿ ಸನ್ಧಿಗಳನ್ನೂ ಪೂಜಿಸಿ, ಸರ್ವೋಪಚಾರಂಗಳಂ ಮಾಡಿ, ನಿರ್ಮಾಲ್ಯವಂ ವಿಸರ್ಜಿಸಿ, ಪಾದಶಬ್ದದಿಂದಙ್ಗುಷ್ಠಮಾತ್ರವೇ ಅಲ್ಲವಾದ್ದರಿಂದ ವಿಶಿಷ್ಟಪಾದದ್ವಯ ವನ್ನೂ ಪಾತ್ರೆಯಲ್ಲಿರಿಸಿ, ಮೂಲಮನ್ತ್ರದಿಂದಭಿಷೇಕಿಸಿ, ಆ ತೀರ್ಥವನ್ನು ಸ್ವರ್ಣಪಾತ್ರೆಯೊಳ್ ತುಂಬಿ, ಅದನ್ನು—ಗನ್ಧ, ಅಕ್ಷತ, ಪುಷ್ಪ, ಧೂಪ, ದೀಪಾದಿಗಳಿಂದ ಪೂಜಿಸಿ, ನೈವೇದ್ಯಮಂ ಸಮರ್ಪಿಸಿ, "ಇಮಮ್ಮೇ ಗಂಗೇ ಯಮುನೇ"—"ಕದ್ರುದ್ರಾಯ ಪ್ರಚೇತಸೇ"—"ಮಾತ್ವಾ ರುದ್ರ" ಎಂಬ ಮನ್ತ್ರಗಳಿಂದಭಿಮನ್ತ್ರಿಸಿ, "ಪಾದೋದಕಂ ಯಥಾ ಭಕ್ತ್ಯಾ ಸ್ವೀಕರೋತಿ ಮಹೇಶಿತುಃ ‖ ತಥಾ ಶಿವಾತ್ಮನೋರ್ನಿತ್ಯಂ ಗುರುಜಙ್ಗಮಯೋರಪಿ" ಎಂಬ ಪ್ರಮಾಣಾನುಸಾರವಾಗಿ, ಶಿವಪಾದೋದವಂ ಸ್ವೀಕರಿಸುವಂತೆ ಗುರುಜಙ್ಗಮರ ಪಾದೋದಕವಂ ಸ್ವೀಕರಿಸಬೇಕಾದ್ದರಿಂದ, ಪೂಜ್ಯರಿಂದ ಚಮಸರೂಪಪಾತ್ರೆಯಿಂ (ಉದ್ಧರಣೆಯಿಂದ) ಕೊಡಲ್ಪಟ್ಟ ತೀರ್ಥವನ್ನು ದಕ್ಷಿಣಹಸ್ತದಿಂ ಪರಿಗ್ರಹಿಸಿ, ಅದನ್ನು—"ಋತಂ ಸತ್ಯಂ" ಎಂಬ ಮನ್ತ್ರದಿಂ ಸ್ವೀಕರಿಸಿ, ಶಿರಸ್ಸಿನಲ್ಲಿ ಪ್ರೋಕ್ಷಣವಂ ಮಾಡಿಕೊಳ್ಳಬೇಕು. ಇದು ವೀರಶೈವಶಾಸ್ತ್ರತತ್ವಾರ್ಥ ಪರ್ಯಾಲೋಚನೆಯಿಂ ನಿಶ್ಚೈಸಲ್ಪಟ್ಟ ವಿಧಾನವಾದ್ದರಿಂದ ಸತ್ಪುರುಷರಿಂದಙ್ಗೀಕರಿಸಲ್ಪತಕ್ಕದು.

ಆದರೆ ಒಂದೇಕಡೆ ಅನೇಕ ಭಕ್ತರಿದ್ದರೆ, ಅವರು—ಭಕ್ತಸ್ಥಲೋಕ್ತಕ್ರಿಯಾ ನಿರ್ವಾಹಕ್ಕೋಸ್ಕರ ಪ್ರತ್ಯೇಕ ಪ್ರತ್ಯೇಕವಾಗಿ ಚರಮೂರ್ತಿಯ ಪಾದಗಳಂ ಪೂಜಿಸ

ಬೇಕೋ ಎಂದರೆ,—ತೀರ್ಥಸಮ್ಪಾದನಾರ್ಥವಾಗಿ ಚರ ಪಾದಪೂಜೆಯಂ ಮಾಡುವ ಆ ಪೂಜಕನು—ಭಕ್ತಸ್ಥಲದಲ್ಲಿರುವ ಮಾಹೇಶ್ವರರಂ ನಮಿಸಿ, ಅವರಿಂದ ಭಸ್ಮಧಾರಣೆಯಂ ಮಾಡಿಸಿಕೊಂಡು, ಈ ಪ್ರಕಾರವಾಗಿ ಎಷ್ಟುಜನ ಮಾಹೇಶ್ವರರಿದ್ದರೂ ಅವರನ್ನು ಕ್ರಮದಿಂ ನಮಿಸಿ, ಅವರ ಅನುಜ್ಞೆಯಂ ಪಡೆದು ಪೂಜ್ಯನ ಪಾದಪೂಜಾದಿ ತೀರ್ಥಪೂಜಾನ್ತವಾಗಿ ನೆರವೇರಿಸಿ, ಬಳಿಕ ಪೂಜ್ಯನ ಪಕ್ಕದಲ್ಲಿ ಕುಳಿತಿರಬೇಕು. ಈ ಪೂಜಕನಿಗೆ ಭಸ್ಮಧಾರಣೆಯಂ ಮಾಡಿದ ಮಾಹೇಶ್ವರರಾದರೋ ಯಾವ ಕ್ರಮದಲ್ಲಿ ಭಸ್ಮವಂ ಧರಿಸಿದರೋ ಆ ಕ್ರಮದಲ್ಲಿಯೇ ಒಬ್ಬರೊಬ್ಬರೇ ಪೂಜ್ಯನ ಸಮೀಪಕ್ಕೆ ಬಂದು, ಸೂಕ್ಷ್ಮವಾಗಿ ಜಲ, ಭಸ್ಮ, ಗನ್ಧಾಕ್ಷತ ಪುಷ್ಪಗಳಿಂದ ಪೂಜ್ಯನ ಪಾದದ್ವಯಕ್ಕೆ ಅಭಿವನ್ದನ ಪೂರ್ವಕವಾಗಿ ಅರ್ಪಿಸಿ, ಆ ಪೂಜ್ಯರಿಂ ಕೊಡಲ್ಪಟ್ಟ ತೀರ್ಥವನ್ನು ಸ್ವೀಕರಿಸಿ, ಶಿರಸ್ಸಿನಲ್ಲಿ ಪ್ರೋಕ್ಷಣವಂ ಮಾಡಿಕೊಳ್ಳಬೇಕು. ಇಲ್ಲಿ; ಮಾಹೇಶ್ವರರು ಭಸ್ಮವಂ ಯಾವಕಾರಣದಿಂ ಧರಿಸಬೇಕೆಂದರೆ, ತಾವು ಮಾಡತಕ್ಕ ಚರಪಾದಾರ್ಚನೆಯು ಈತನಿಂ ಮಾಡಲ್ಪಡುವುದರಿಂದ ಭಸ್ಮಧಾರಣವು ತಮ್ಮಿಂದ ಕೊಡಲ್ಪಟ್ಟ ವರಣರೂಪವಾದುದೆಂದು ತಿಳಿಯಲ್ತಕ್ಕುದು. ಆ ಮಾಹೇಶ್ವರರು ತೀರ್ಥಸ್ವೀಕಾರವಂ ಮಾಡಿದ ಬಳಿಕ, ಆಪೂಜ್ಯನ ಪಕ್ಕದಲ್ಲಿ ಕುಳಿತಿದ್ದ ಪೂಜಕನು ಪೂಜ್ಯನಮುಂದೆ ಬಂದು ಕುಳಿತುಕೊಂಡು; ಆ ತೀರ್ಥವಂ ಸ್ವೀಕರಿಸಿ, ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡು, ಪಾತ್ರದಲ್ಲಿ ಮಿಕ್ಕ ತೀರ್ಥವನ್ನು ನಿಶ್ಶೇಷವಾಗಿ ಸೇವಿಸಿ, ಎದ್ದು ನಮಸ್ಕರಿಸಿ, ಆ ಪೂಜ್ಯನಿಗೆ ಶಿವಾರ್ಪಣೆಗಾಗಿ ಪಾಕಮಾಡಲ್ಪಟ್ಟ ಸಮಸ್ತ ಪದಾರ್ಥಗಳನ್ನು ಲಿಙ್ಗಮುದ್ರಾಙ್ಕಿತವಾದ ಭಾಜನದಲ್ಲಿರಿಸಬೇಕು. ಬಳಿಕಾಪೂಜ್ಯನು ಯಥಾವಿಧಿಯಾಗಿ ಆ ದ್ರವ್ಯಗಳನ್ನು ತನ್ನಿಷ್ಟಲಿಙ್ಗಕ್ಕೆ ಸಮರ್ಪಿಸಿ, ಐಕ್ಯಸ್ಥಲಪ್ರವಿಷ್ಟನಾಗಿ ಶಿವಪ್ರಸಾದವಂ ಸ್ವೀಕರಿಸಬೇಕು.

ಅನನ್ತರದೊಳಾ ಪೂಜಕನು—“ ಯಥಾ ಶಿವಪ್ರಸಾದಾನ್ನಂ ಸ್ವೀಕಾರ್ಯಂ ಲಿಙ್ಗತತ್ಪರೈಃ || ತಥಾ ಗುರೋಃ ಪ್ರಸಾದಾನ್ನಂ ತಥೈವ ಶಿವಯೋಗಿನಃ ” ಎಂಬ ವಚನಮುಂಟಾಗಿ ಶಿವಪ್ರಸಾದಾನ್ನವಂ ಸ್ವೀಕರಿಸುವಂತೆ, ಗುರುಜಙ್ಗಮರ ಪ್ರಸಾದಾನ್ನವಂ ಸ್ವೀಕರಿಸತಕ್ಕುದು ಯೋಗ್ಯವಾದುದರಿಂದ ಆ ಪೂಜ್ಯನನ್ನು ತೀರ್ಥಸ್ವೀಕಾರಸಮಯದಲ್ಲಿ ನಮಿಸಿದಂತೆ ನಮಿಸಿ, ಆ ಪೂಜ್ಯನಿಂ ಕೊಡಲ್ಪಡುವ ಪ್ರಸಾದಾನ್ನದ ಅಗುಳುಗಳನ್ನು ದಕ್ಷಿಣ ಹಸ್ತಸ್ಥಲದಿಂ ಪರಿಗ್ರಹಿಸಿ, ಮೂಲಮನ್ತ್ರೋಚ್ಚಾರಣ ಪೂರ್ವಕವಾಗಿ ಸ್ವೀಕರಿಸಿ, ಬಳಿಕ ತನ್ನ ಶಿವಪೂಜಾಸ್ಥಾನದಲ್ಲಿ ಕುಳಿತು, ಮಾಹೇಶ್ವರ ಸ್ಥಲ ಪ್ರವಿಷ್ಟನಾಗಿ ಕ್ರಮದಿಂ ಲಿಙ್ಗಪೂಜೆಯನ್ನು ಮಾಡಬೇಕು.

ಆದರೆ, ಆ ಪೂಜಕನು—ಗುರುವಿನಿಂದಾದರೂ ಜಙ್ಗಮನಿಂದಾದರೂ ಕೊಡಲ್ಪಟ್ಟ ಪ್ರಸಾದದ ಅಗುಳುಗಳನ್ನು “ ಅನಿವೇದ್ಯಚ ಭುಂಜಾನೋ ನರೋಭವತಿ ಕಿಲ್ಬಿಷೀ ” ಎಂಬ ವಚನವುಂಟಾಗಿ ತನ್ನಿಷ್ಟಲಿಂಗಕ್ಕೆ ಸಮರ್ಪಿಸದೆ ಸ್ವೀಕರಿಸಿದೊಡೆ ದೋಷವಿಲ್ಲವೋ? ಎಂದರೆ ಆ ವಚನವು ಪದಾರ್ಥಪರವಾದುದರಿಂದ ದೋಷಜ್ಞಾನವು ಅಜ್ಞಜನಕ್ಕೆ ಭ್ರಾಂತಿಯಿಂದುಂಟಾಗತಕ್ಕದ್ದು.

ಗುರುಜಂಗಮರ ಪಾದತೀರ್ಥಪ್ರಸಾದಂಗಳನ್ನು—ಪೂಜಕನು ತನ್ನಿಷ್ಟಲಿಂಗಕ್ಕೆ ಸಮರ್ಪಿಸಿ ಸ್ವೀಕರಿಸಬೇಕೆಂಬುದಕ್ಕೆ ಏನುಗತಿಯೆಂದರೆ, ಅದು ಶಾಸ್ತ್ರಾರ್ಥಪರ್ಯಾಲೋಚನೆಯಿಂ ತತ್ವವಿಚಾರಂಗೈದು ಪರಾಮರ್ಶಂಗೈಯ್ಯಲಾಗಿ ಸಂಘಟಿಸುವುದಿಲ್ಲವು. “ ಏಕಮೂರ್ತಿಸ್ತ್ರಯೋಭಾಗಾಃ ಗುರುರ್ಲಿಂಗಂ ಚ ಜಂಗಮಃ || ಜಙ್ಗಮಶ್ಚ ಗುರುರ್ಲಿಙ್ಗಂ ತ್ರಿವಿಧಂ ತ್ವೇಕ ಮುಚ್ಯತೇ ” ಎಂದೂ, “ ಏಕಏವ ಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ || ಗುರುಜಂಗಮಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ ” ಎಂದೂ ಆಗಮವಚನಗಳುಂಟಾಗಿ, ಶಿವನು-ಭಕ್ತಾನುಗ್ರಹಕ್ಕೋಸ್ಕರ ಗುರುರೂಪನಾಗಿಯೂ, ಲಿಙ್ಗರೂಪನಾಗಿಯೂ, ಜಙ್ಗಮರೂಪನಾಗಿಯೂ ಇರುವುದರಿಂದ ಆ ಮೂರ್ತಿತ್ರಯ ಸ್ವರೂಪಕ್ಕೆ ಐಕ್ಯವೇ ಇರುವುದದರಿಂದ, ಪರಸ್ಪರತೀರ್ಥಪ್ರಸಾದಗಳಿಗೈಕ್ಯವಾಯಿತ್ತಾಗಿ, ಮತ್ತಂ ‘ ಪ್ರಥಮಂ ಪೂಜಯೇದ್ಗನ್ಧಪುಷ್ಪೈಸ್ಸಂಕ್ಷಾಲಯೇತ್ತತಃ || ಅಙ್ಗುಷ್ಠೇ ಭಾವಯೇದ್ರುದ್ರಂ ತರ್ಜನ್ಯಾಂ ಶಙ್ಕರಂ ಸ್ಮರೇತ್ || ಮಧ್ಯಮಾಯಾಂ ಮಹಾದೇವ ಮನಾಮಿಕಾಯಾಂ ತ್ರಿಯಮ್ಬಕಮ್ || ಕನಿಷ್ಠಿಕಾಯಾಮೀಶಾನಂ ಪಾದೋಪರಿ ಕಪರ್ದಿನಮ್ || ಪಾದಾಧಃ ಪಞ್ಚವದನಂ ಗುಲ್ಫಯೋಃ ರುದ್ರಭರ್ಗಕೌ || ಸರ್ವಂ ಲಿಙ್ಗಮಯಂ ಧ್ಯಾತ್ವಾ ಪಾದಂ ಜಂಗಮ ಲಿಂಗಿನಃ|| ಪ್ರಕ್ಷಾಳಿತಂ ತು ತತ್ತೀರ್ಥಂ ಪೀತ್ವಾ ಶಿರಸಿಧಾರಯೇತ್ ” ಎಂಬ ಪಾರಮೇಶ್ವರಾಗಮದ ಪ್ರಸಿದ್ಧ ವಚನಗಳಿಂದ ಜಙ್ಗಮನ ಪಾದದ್ವಯದ-ಅಂಗುಷ್ಠದಲ್ಲಿ ರುದ್ರನನ್ನು, ತರ್ಜನಿಯಲ್ಲಿ ಶಂಕರನನ್ನು, ಮಧ್ಯಮೆಯಲ್ಲಿ ಮಹಾದೇವನನ್ನು, ಅನಾಮಿಕೆಯಲ್ಲಿ ತ್ರಿಯಂಬಕನನ್ನು, ಕನಿಷ್ಠಿಕೆಯಲ್ಲಿ ಈಶಾನನನ್ನು, ಪಾದಗಳ ಉಪರಿಭಾಗದಲ್ಲಿ ಕಪರ್ದಿಯನ್ನು, ಪಾದಗಳ ಅಧೋಭಾಗದಲ್ಲಿ ಪಞ್ಚವಕ್ತ್ರನನ್ನು ಗುಲ್ಫಗಳಲ್ಲಿ ರುದ್ರ ಭರ್ಗರನ್ನು, ಹೀಗೆ ಜಙ್ಗಮನ ಪಾದವನ್ನು ಲಿಙ್ಗಮಯವನ್ನಾಗಿ ಧ್ಯಾನಿಸಿ, ಪೂಜೆಯಂ ಮಾಡಿ, ಪಾದತೀರ್ಥವಂ ಪಡೆದು; ಸ್ವೀಕರಿಸಿ, ಶಿರಃಪ್ರೋಕ್ಷಣವಂ ಮಾಡಿಕೊಳ್ಳಬೇಕು. ಎಂದು ಉಕ್ತವಾಯಿತಲ್ಲದೆ, ಜಂಗಮನ ಪಾದತೀರ್ಥಪ್ರಸಾದಂಗಳನ್ನು ಪೂಜಕನು-ತನ್ನಿಷ್ಟಲಿಙ್ಗಕ್ಕೆ ಸಮರ್ಪಿಸಿ ಸ್ವೀಕರಿಸಬೇಕೆಂಬುದು ಉಕ್ತವಾಗಲಿಲ್ಲ; ಆದ್ದರಿಂದ ಅದು ಸಙ್ಘಟಿಸುವುದಿಲ್ಲವು.

ಪೂಜಕನು—ಗುರುಜಂಗಮರ ಪಾದೋದಕವನ್ನು ಲಿಙ್ಗಕ್ಕೆ ಸಮರ್ಪಿಸದೆ ಸ್ವೀಕರಿಸುವುದಾದಾಗ್ಯೂ, ಅವರ ಪ್ರಸಾದ ಸಿಕ್ಥಗಳನ್ನು ಲಿಙ್ಗಕ್ಕೆ ಸಮರ್ಪಿಸದೆ ಸ್ವೀಕರಿಸಬಹುದೇ ? ಎಂದರೆ, " ಅರ್ಪಿತಾನ್ಯರ್ಪಯೇದ್ಯಸ್ತು ರೌರವಂ ನರಕಂ ವ್ರಜೇತ್ " ಎಂಬ ವೀರಾಗಮ ವಚನಮುಂಟಾಗಿ, ಗುರುವಿನಿಂದ ಅಥವಾ ಜಙ್ಗಮನಿಂದ ತನ್ನ ಲಿಙ್ಗಕ್ಕೆ ಸಮರ್ಪಿತವಾದುದನ್ನು ಪೂಜಕನು—ತನ್ನ ಲಿಙ್ಗಕ್ಕೆ ಸಮರ್ಪಿಸಿದೊಡೆ ದೋಷಪ್ರಾಪ್ತಿಯಾಗುವುದರಿಂದ, ಅದೂ ಸಂಭವಿಸುವುದಿಲ್ಲವು.

ಮತ್ತಂ, ಭೋಜನಕಾಲದಲ್ಲಿ ಲಿಙ್ಗಕ್ಕೆ ನಿವೇದಿಸಲರ್ಹವಾದುದುಪದಾರ್ಥವು. ಅದು ಆಯಾ ಪದಾರ್ಥಭಾವನೆಯಿಂ ಹೊರತು ಸಮರ್ಪಿಸಲಾಗುವುದಿಲ್ಲವು. " ಪ್ರಸಾದಸ್ಯ ಪದಾರ್ಥತ್ವಂ ದೋಷಾಯ ಭವತಿ ಧ್ರುವಮ್ " ಎಂಬ ವಾತುಲಾಗಮ ವಚನ ಮುಂಟಾಗಿ, ಪ್ರಸಾದಕ್ಕೆ ಪದಾರ್ಥತ್ವವನ್ನು ಹೇಳುವುದು ನಿಶ್ಚಯವಾಗಿಯೂ ದೋಷವಾಗುತ್ತದೆ. ಲಿಂಗ ಪ್ರಸಾದಕ್ಕೂ, ಗುರುಪ್ರಸಾದಕ್ಕೂ, ಜಂಗಮ ಪ್ರಸಾದಕ್ಕೂ ಪದಾರ್ಥಭಾವವಂ ಕಲ್ಪಿಸುವುದರಿಂದ ದೋಷವು ಸಂಭವಿಸುತ್ತದೆಯಾದ್ದರಿಂದ, ಅದು ಸಂಭವಿಸುವುದಿಲ್ಲವು.

ಮತ್ತಂ, " ಮಹತಾ ಲಿಙ್ಗರೂಪೇಣ ಮಹತಾ ಜಙ್ಗಮೇನ ಚ ॥ ದ್ವಿವಿಧೇನ ಸಮುದ್ಭೂತ ಪ್ರಸಾದಾಯ ನಮೋನಮಃ " ಎಂಬ ಬ್ರಹ್ಮಾಂಡ ಪುರಾಣೋಕ್ತಿಯುಂಟಾಗಿ, ಚರಮೂರ್ತಿಯು ತನ್ನ ಲಿಙ್ಗಕ್ಕೆ ಸಮರ್ಪಿಸಿದ್ದರಿಂದ ಆಲಿಂಗಮುಖದಿಂದಲೂ, ತತ್ಪ್ರಸಾದವನ್ನು ಚರಮೂರ್ತಿಯು ಸೇವಿಸಿದ್ದರಿಂದ ಚರಮೂರ್ತಿಯಿಂದಲೂ ಈ ಎರಡು ವಿಧದಿಂ ಪುಟ್ಟಿದ ಪ್ರಸಾದಕ್ಕಾಗಿ ನಮಸ್ಕಾರವೆಂದು ಅದನ್ನು ಸ್ವೀಕರಿಸಬೇಕಾಗಿರುವುದರಿಂದ, ಸಮರ್ಪಣೆಯು ಸಂಭವಿಸುವುದಿಲ್ಲವು.

ಮತ್ತಂ "ಲಿಙ್ಗದ್ವಯ ಪ್ರಸಾದಂ ಚ ಯೋ ಭುಙ್ಕ್ತೇ ಶ್ರದ್ಧಯಾನ್ವಿತಃ ॥ ತದೀಯೋಚ್ಛಿಷ್ಟಮಾಸಾದ್ಯ ಸರ್ವೇ ಯಾನ್ತಿ ಪರಾಂಗತಿಮ್ " ಎಂಬ ವಚನವು ಸ್ಥಿರಚರಲಿಙ್ಗಗಳಿಂ ಕ್ರಮವಾಗಿ ಬುಂಜಿಸಲ್ಪಟ್ಟುದಾದ ಲಿಙ್ಗದ್ವಯ ಪ್ರಸಾದವಂ ಬುಂಜಿಸಬೇಕೆಂದು ಹೇಳುವುದರಿಂದಲೂ ಸಮರ್ಪಣೆಯು ಸಂಭವಿಸುವುದಿಲ್ಲವು.

ಮತ್ತಂ ಪೂಜಕನು—ಪೂಜ್ಯನನ್ನು ಶಿವಸಮಾನನನ್ನಾಗಿ ಭಾವಿಸಬೇಕೆಂದು ನಿರೂಪಿತವಾಗಿರುವುದರಿಂದ, ಆ ರೀತಿಯಾಗಿಯೇ ಪೂಜಕನಿಂ ಗುರುಚರಮೂರ್ತಿಗಳು ಶಿವಸಮಾನರೆಂದೇ ಭಾವಿಸಲ್ಪಡುವುದರಿಂದಲೂ ಸಮರ್ಪಣೆಯು ಸಂಭವಿಸುವುದಿಲ್ಲವು.

ಮತ್ತಂ, ಪೂಜ್ಯನ ಪ್ರಸಾದವು—ಪೂಜಕನಿಂ ಸೇವಿಸಲ್ಪಡುವುದಕ್ಕೆ ಯೋಗ್ಯವು. ಸರ್ವಜಗನ್ನಾಯಕನಾದ ಪರಮೇಶ್ವರನೇ ಪೂಜ್ಯನು. ಮಿಕ್ಕ ಬ್ರಹ್ಮಾದಿ

ಮನುಷ್ಯಾನ್ತ್ರವಾಗಿರುವವರೆಲ್ಲರೂ ಪೂಜಕರೇ ಆಗಿರುವುದರಿಂದಲೂ, ಸಂಭವಿಸು ವುದಿಲ್ಲವು.

ತನ್ನ ಚಿತ್ಕ್ರಿಯಾಶಕ್ತಿಗಳಿಂ ವಿಶ್ವಪ್ರಕಾಶಕನಾದ ಶಿವನನ್ನು—ಅತಿಶಯ ದಿಂ ಮಾಯಾಕಾರ್ಯಕೋಟಿ ಪ್ರವಿಷ್ಟಂಗಳಾದುದರಿಂದ ಅನಿತ್ಯಗಳೆಂದು ತಿಳಿಯಲರ್ಹ ವಾದ ಸಮಸ್ತವಾದ ಪದಾರ್ಥವನ್ನೂ ಮಿಾರಿ ಅದಕ್ಕೆ ಜೀವನ ಭೂತವಾದ ಜ್ಞತ್ವ ಕರ್ತೃತ್ವ ಸ್ವಭಾವ ವಿಶಿಷ್ಟನನ್ನಾಗಿ ತಿಳಿದು, ಜೀವೇಶ್ವರ ಸಾಧಾರಣವಾದ ಅಸ್ಮ ದ್ರೂಪಾತ್ಮಕತ್ವಾಭಿನ್ನನಾದ ಶಿವನೇ—ತಾನು, ಎಂಬ ದೃಢನಿಶ್ಚಯದಿಂ ಸ್ವಸ್ವರೂಪ ವನರಿತವನಾದ ಜಙ್ಗಮಾಭಿಧಾನನಾದ ಶಿವಯೋಗಿಯಾದ ಚರಮೂರ್ತಿಯೇ ಶಿವನಾ ದುದರಿಂದಲೂ, ಸಮರ್ಪಣೆಯು ಸಂಭವಿಸುವುದಿಲ್ಲವು.

ಶಿವ ಗುರು ಚರಮೂರ್ತಿಗಳಿಗೆ ಪರಸ್ಪರಭೇದವಿಲ್ಲದುದರಿಂದ ಲಿಙ್ಗಪೂಜೆಯಂ ಮಾಡಿದೊಡೆ ಗುರುಚರಪೂಜೆಯು, ಗುರುಚರಪೂಜೆಯಂ ಮಾಡಿದೊಡೆ ಶಿವಪೂಜೆಯು ಆಗುವುದರಿಂದಲೂ, ಶಿವಪಾದೋದಕ ಪ್ರಸಾದ ಸೇವನೆಯಿಂ ಗುರುಚರಪಾದೋದ ಕಪ್ರಸಾದ ಸೇವನವು ಆಗುವುದರಿಂದಲೂ, ಗುರುಚರ ಪಾದೋದಕ ಪ್ರಸಾದಸೇವನೆ ಯಿಂ ಶಿವಪಾದೋದಕ ಪ್ರಸಾದಸೇವನವು ಆಗುವುದರಿಂದಲೂ, ಪ್ರತ್ಯೇಕವಾಗಿ ಶಿವ, ಗುರು, ಚರ ಪೂಜೆಗಳಂ ಮಾಡಬೇಕಾದುದೂ, ಶಿವ ಗುರು ಚರತೀರ್ಥಪ್ರಸಾದಂಗಳಂ ಸೇವಿಸಬೇಕಾದುದೂ, ಏನುಕಾರಣದಿಂದೆನೆ,–"ಯಸ್ಯ ದೇವೇ ಪರಾಭಕ್ತಿರ್ಯಥಾ ದೇ ವೇ ತಥಾಗುರೌ"— "ಯಥಾ ದೇವೇ ಜಗನ್ನಾಥೇ ಸರ್ವಾನುಗ್ರಹಕಾರಕೇ|| ತಥಾ ಗುರುವರೇ ಕುರ್ಯಾದುಪಚಾರಾನ್ನಿವೇದಿನೇ"– ಯಥಾ ಗುರೌ ಯಥಾ ಲಿಂಗೇ ಭಕ್ತಿ ಮಾನ್ಪರಿವರ್ತತೇ || ಜಙ್ಗಮೇ ಚ ತಥಾ ನಿತ್ಯಂ ಭಕ್ತಿಂ ಕುರ್ಯಾದ್ವಿಚಕ್ಷಣಃ"— "ಪಾದೋದಕಂ ಯಥಾ ಭಕ್ತ್ಯಾಸ್ವೀಕರೋತಿ ಮಹೇಶಿತುಃ || ತಥಾಶಿವಾತ್ಮ ನೋರ್ನಿತ್ಯಂ ಗುರುಜಙ್ಗಮಯೋರಪಿ"—"ಯಥಾ ಶಿವಪ್ರಸಾದಾನ್ನಂ ಸ್ವೀಕಾರ್ಯಂ ಲಿಙ್ಗತತ್ಪರೈಃ || ತಥಾ ಗುರೋಃ ಪ್ರಸಾದಾನ್ನಂ ತಥೈವ ಶಿವಯೋಗಿನಃ" ಎಂಬ ಪೂರ್ವೋಕ್ತ ಶ್ರುತ್ಯಾದಿವಚನ ಪ್ರಮಾಣ ಜಾಲವಿರುವುದರಿಂದ, ಗುರುಜಙ್ಗಮಪೂ ಜೆಯೂ ತತ್ಪಾದೋದಕ ಪ್ರಸಾದ ಸ್ವೀಕಾರವೂ ವಿಧಿಪ್ರಾಪ್ತಮಾದುದರಿಂದ, ಅವೆರ ಡೂ ಸರ್ವಥಾ ಬಿಡದೆ ಆಚರಿಸಲ್ತಕ್ಕುದೆಂಬುದು ಸತ್ಯವು.

ಮತ್ತಂ, ಪೂರ್ವೋಕ್ತವಚನಗಳಿಂದಲೂ ಗುರುಜಙ್ಗಮರ ಪಾದೋದಕ ಪ್ರ ಸಾದಗಳನ್ನು ಲಿಙ್ಗಕ್ಕೆ ಸಮರ್ಪಿಸಬೇಕೆಂಬಂಶವು ಸಿದ್ಧವಾಗುವುದಿಲ್ಲ. ಅದು ಹ್ಯಾ ಗೆಂದೊಡೆ—ಶಿವಪಾದೋದಕ ಪ್ರಸಾದಗಳನ್ನು ಭಕ್ತಿಯಿಂ ಸ್ವೀಕರಿಸುವಂತೆ, ಗುರು

ಜಙ್ಗಮರ ಪಾದೋದಕ ಪ್ರಸಾದಗಳನ್ನು ಭಕ್ತಿಯಿಂ ಸ್ವೀಕರಿಸಬೇಕೆಂಬಲ್ಲಿ; ಶಿವಪಾದೋದಕ ಪ್ರಸಾದಗಳು ಉಪಮಾನಗಳಾದವು. ಗುರುಜಂಗಮ ಪಾದೋದಕ ಪ್ರಸಾದಗಳು ಉಪಮೇಯಗಳಾದವು. ಆದುದರಿಂದಲೇ ಶಿವಪಾದೋದಕವತ್ ಗುರುಚರ ಪಾದೋದಕವಂ ಸ್ವೀಕರಿಸಬೇಕೆಂದು ಹೇಳುವುದಕ್ಕಾಗಿ "ಪಾದೋದಕಂ ಯಥಾ ಭಕ್ತ್ಯಾ"-"ಯಥಾ ಶಿವಪ್ರಸಾದಾನ್ನಂ" ಎಂಬ ವಚನಗಳು ಪ್ರವರ್ತಿಸಿದವಲ್ಲದೆ, ಲಿಂಗಕ್ಕೆ ಸಮರ್ಪಿಸಿ ಸ್ವೀಕರಿಸಬೇಕೆಂದು ಹೇಳುವುದಕ್ಕಾಗಿ ಪ್ರವರ್ತಿಸಲಿಲ್ಲವಾಗಿ, ಸಮರ್ಪಣೆಯು ಸಂಭವಿಸುವುದಿಲ್ಲವು.

ಆದರೂ, "ತಸ್ಮಾಲ್ಲಿಂಗೇ ಪ್ರಸಾದಂ ಚ ನಿರ್ಮಾಲ್ಯಂ ಪಜ್ಜಲಂ ತಥಾ|| ಅರ್ಪಯೇಚ್ಚರಲಿಙ್ಗಸ್ಯ ಶೃಣು ಷಣ್ಮುಖ! ಸರ್ವದಾ" ಎಂದು ವಾತುಲತನ್ತ್ರೋತ್ತರ ವಚನವಿರುವುದರಿಂ ವಿಧಿಪ್ರಾಪ್ತವಾಯಿತಾಗಿ ಅಭ್ಯನುಜ್ಞೆಯು ಇರುವುದರಿಂ, ಪೂಜಕನು—ಗುರುಚರರ ಪಾದೋದಕ ಪ್ರಸಾದಂಗಳನ್ನು ತನ್ನಿಷ್ಟಲಿಙ್ಗಕ್ಕೆ ಸಮರ್ಪಿಸಿ ಸ್ವೀಕರಿಸಬೇಕೆಂಬುದಂಗೀಕರಿಸಲ್ತಕ್ಕುದು. ಸ್ವೀಕರಿಸಬೇಕಾದರೆ ಪೂರ್ವೋಕ್ತಪ್ರಕಾರವಾಗಿ ಕೊಡಲ್ಪಟ್ಟ ತೀರ್ಥವಂ ದಕ್ಷಿಣಹಸ್ತತಲದಲ್ಲಿ ತೆಗೆದುಕೊಂಡು ಲಿಙ್ಗಕ್ಕೆ ಸಮರ್ಪಿಸಿ ಸ್ವೀಕರಿಸತಕ್ಕದ್ದು. ಇಲ್ಲಿ; ಸಮರ್ಪಣೆಯಲ್ಲದೆ, ಅಭಿಷೇಕವು ಸಂಭವಿಸುವುದಿಲ್ಲವು.

ಗುರುಚರರ ಪಾದತೀರ್ಥ ಸ್ವೀಕಾರವೂ, ತತ್ಪ್ರಸಾದ ಸ್ವೀಕಾರವೂ, ಏಕಕಾಲದಲ್ಲಿ ಸಂಭವಿಸುವುದರಿಂದ, ಪ್ರಸಾದ ಸ್ವೀಕಾರ ವಿಷಯವು ತೀರ್ಥಸೇವನ ಪ್ರಕರಣದಲ್ಲಿ ನಿರೂಪಿತವಾಯಿತು.



ಇತಿ ಶ್ರೀಮತ್ಪರಶಿವ ಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲಜ್ಞಾನವೈಭವನಾದ, ನಿಖಿಲ ನಿಗಮಾಗಮೇತಿಹಾಸ ಸ್ಮೃತಿ ಪುರಾಣ ಪದವಾಕ್ಯ ಪ್ರಮಾಣ ಪಾರಾವಾರಪಾರೀಣನಾದ, ನಿರಾಭಾರ ವೀರಶೈವಸಾಮ್ರಾಜ್ಯಧುರನ್ಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿಯೊಳ್ ಅಷ್ಟಾವರಣಪ್ರಕರಣದಲ್ಲಿ ಪಾದೋದಕಸ್ಥಲ ನಿರೂಪಣಮ್.



|| ಶ್ರೀಃ ||

ಸದಾಶಿವಾಯ ನಮಃ.



# ಪ್ರಸಾದಸ್ಥಲಮ್.

" ರುದ್ರೇಣಾತ್ತ ಮಶ್ನನ್ತಿ ರುದ್ರೇಣ ಪೀತಂ ಪಿಬನ್ತಿ ರುದ್ರೇಣಾಘ್ರಾತಂ ಜಿಘ್ರಂತಿ ಯಸ್ಮಾದ್ಬ್ರಾಹ್ಮಣಾಃ ಪ್ರಶಾನ್ತಮನಸೋ ವಿದ್ವಾಂಸೋ ನಿರ್ಮಾಲ್ಯಮೇವ ನಿಷೇವೇತ ನಿರ್ಮಾಲ್ಯ ಮೇವಾಶ್ನೀಯಾತ್ " ಎಂಬ ಜಾಬಾಲಶ್ರುತ್ಯನುಸಾರವಾಗಿ, ಶ್ರೇಷ್ಠರೂ ಶುದ್ಧಾನ್ತಃಕರಣರೂ ಶಿವನಿಂದ ಬುಂಜಿಸಲ್ಪಟ್ಟುದನ್ನೇ ಬುಂಜಿಸುತ್ತಾರೆ, ಶಿವನಿಂದಾಘ್ರಾಣಿಸಲ್ಪಟ್ಟುದನ್ನೇ ಆಘ್ರಾಣಿಸುತ್ತಾರೆ, ಶಿವನಿಂದ ಪಾನಮಾಡಲ್ಪಟ್ಟುದನ್ನೇ ಪಾನ ಮಾಡುತ್ತಾರೆ. ಎಂಬಲ್ಲಿ ಸಾಕ್ಷಿಯು.—

" ಶಿಷ್ಟಾಶ್ಯಾನ್ನಾತ್ತಿಷ್ಟ ರುದ್ರೇಣ ಭುಕ್ತಮೇವ ಹಿ ಭುಞ್ಜತೇ ||
ಘ್ರಾತಮೇವ ಹಿ ಜಿಘ್ರನ್ತಿ ಪೀತಮೇವ ಪಿಬನ್ತಿ ಚ "

ಮತ್ತಂ, ಶಿವಾರ್ಪಿತವಾದ ಪ್ರಸಾದಾನ್ನವನ್ನು ಬುಂಜಿಸಬೇಕು. ಶಿವಾರ್ಪಿತವಾದ ನೀರನ್ನೇ ಕುಡಿಯಬೇಕು. ಶಿವಾಘ್ರಾಣಿತವಾದ ಹೂವನ್ನೇ ಆಘ್ರಾಣಿಸಬೇಕೆಂದು ಜಾಬಾಲಿಕೀ ಶ್ರುತಿಯು ಹೇಳುತ್ತದೆ. ಎಂಬಲ್ಲಿ ಸಾಕ್ಷಿಯು.—

" ಭುಞ್ಜೀಯಾದ್ರುದ್ರಭುಕ್ತಾನ್ನಂ ರುದ್ರಪೀತಂ ಜಲಂ ಪಿಬೇತ್ ||
ರುದ್ರಾಘ್ರಾತಂ ಸದಾ ಜಿಘ್ರೇದಿತಿ ಜಾಬಾಲಿಕೀ ಶ್ರುತಿಃ "

ಪ್ರಾಣವಿರುವವರೆಗೂ ಪ್ರತಿಜ್ಞಾಪೂರ್ವಕವಾಗಿ, ನಿಶ್ಚಯಬುದ್ಧಿಯುಳ್ಳವನಾಗಿ, ಶಿವಾರ್ಪಿತವಾಗುಳಿದ ಅನ್ನ ಪಾನೀಯವನ್ನನುಭವಿಸಿದವನು—ಗಣಾಧೀಶ್ವರನಹನು. ಎಂಬಲ್ಲಿ ಸಾಕ್ಷಿಯು.—

" ನಿರ್ವಿಕಲ್ಪಧಿಯಾ ಶಮ್ಭುಭುಕ್ತೋಚ್ಛಿಷ್ಟಾನ್ನಪಾನಕಮ್ ||
ಯೋ ಭುಙ್ಕ್ತೇ ಸ ಗಣಾಧೀಶೋ ಯಾವಜ್ಜೀವಂ ಪ್ರತಿಜ್ಞಯಾ "

ಆ ಕಾರಣದಿಂ, ತಾನು ತನ್ನ ಅನ್ತಃಕರಣಶುದ್ಧಿಗಾಗಿ ಸ್ವೇಷ್ಟಲಿಂಗಕ್ಕೆ ಸಮರ್ಪಿಸಿದುದರಿಂ ಶಿವಪ್ರಸಾದವಾದ ಆ ಶೇಷವನ್ನು ತನಗೆ ಹ್ಯಾಗೆ ಸುಖವಹುದೋ, ಹಾಗೆ ಬುಂಜಿಸಬೇಕು. ಎಂಬಲ್ಲಿ ಸಾಕ್ಷಿಯು.—

" ತತಸ್ತ್ವಯನ್ತು ಭುಞ್ಜೀಯಾಚ್ಛುದ್ಧಮನ್ನಂ ಯಥಾಸುಖಂ ||
ನಿವೇದ್ಯಮಾನಂ ದೇವಾಯ ತಚ್ಛೇಷಂ ಸ್ವಾತ್ಮಶುದ್ಧಯೇ "

ಮತ್ತಂ, ಪ್ರಾಜ್ಞನಾದ ಶಿವಭಕ್ತನು—ನಿರ್ಮಾಲ್ಯವಂ ಬುಂಜಿಸಕೂಡದು ಎಂದು ಹೇಳತಕ್ಕ ಸಾಮಾನ್ಯ ವಚನಗಳಿಂದ ಸಂಶಯ ಪಡದೆ, ಸ್ವಾರಾಧ್ಯವಾದ, ಸ್ವೇಷ್ಟಲಿಂಗಕ್ಕೆ ನಿವೇದಿತವಾದ ಚರುವನ್ನು ತಾನೇ ಬುಂಜಿಸಬೇಕಲ್ಲದೆ, ಅನ್ಯರಿಗೆ ಕೊಡಲಾಗದು, ಎಂಬಲ್ಲಿ ಸಾಕ್ಷಿಯು.—

" ಸ್ವಾರಾಧ್ಯಸ್ವೇಷ್ಟಲಿಙ್ಗಸ್ಯ ಚರುಕಂ ಯನ್ನಿವೇದಿತಂ ||
ತತ್ಪ್ರಾಶಯೇತ್ಸ್ವಯಂ ಪ್ರಾಜ್ಞೋ ಹ್ಯನ್ಯಸ್ಮೈ ನತುದಾಪಯೇತ್ "

ಶಿವನಿರ್ಮಾಲ್ಯಧಾರಣದಿಂದಲೂ ಶಿವಪಾದೋದಕ ಪ್ರಸಾದಾನ್ನ ಸೇವನದಿಂದಲೂ ಪ್ರಯೋಜನವೇನೆಂದೊಡೆ.—

ಎಲೈ ಕುಮಾರನೇ ! ಮನುಷ್ಯನು—ನನ್ನ ನಿರ್ಮಾಲ್ಯವನ್ನು ಧರಿಸುವುದರತ್ತಿಣಂ ಸಾಲೋಕ್ಯವನ್ನೂ, ಸರ್ವಕಾಲದಲ್ಲಿಯೂ ನನ್ನ ಪಾದತೀರ್ಥಸ್ವೀಕಾರ ಮಾಡುವುದರಿಂ ಸಾಮೀಪ್ಯವನ್ನೂ, ನನ್ನ ಶೇಷಪ್ರಸಾದವಂ ಬುಂಜಿಸುವುದರಿಂ ಸಾರೂಪ್ಯವನ್ನೂ ಹೊಂದುವನು. ಎಂಬಲ್ಲಿ ಸಾಕ್ಷಿಯು.—

" ನಿರ್ಮಾಲ್ಯಧಾರಣಾತ್ಪುತ್ರ! ಸಾಲೋಕ್ಯಂ ಲಭತೇ ನರಃ ||
ಪಾದೋದಕಸ್ಯ ಪಾನೇನ ಸಾಮೀಪ್ಯಂ ಭಜತೇ ಸದಾ ||
ಮತ್ಪ್ರಸಾದೋಪಭೋಗೇನಸಾರೂಪ್ಯಂ ಲಭತೇಧ್ರುವಮ್ "

ಮತ್ತಂ, ಒಂದಾನೊಂದು ಸಮಯದಲ್ಲಿ; ಪರಮೇಶ್ವರನ ಪಾದೋದಕ ನಿರ್ಮಾಲ್ಯದಿಂ ಕೂಡಿದ ವಾಯುವನ್ನು-ಪುಣ್ಯಶಾಲಿಯಾದ ಆದಿಶೇಷನು ಸೇವಿಸಿ ಸಕಲ ಭೂಮಣ್ಡಲದ ಭಾರವಂ ವಹಿಸಲು ಶಕ್ತನಾದನಲ್ಲದೆ, ಸ್ಥಿರವಾದ ಸರ್ಪಾಧಿಪತಿತ್ವವನ್ನೂ, ಪರಮೇಶ್ವರನಿಗೆ ಆಭರಣವಪತನವನ್ನೂ ಹೊಂದಿದನು. ಎಲೈ ಇನ್ದ್ರನೇ ! ಈ ಶೇಷನಿಗೆ ಸರ್ವಜ್ಞತ್ವಮುಂಟಾಯಿತೆಂಬಲ್ಲಿ ಸನ್ದೇಹವಿಲ್ಲವು. ಶಿವಭಕ್ತನಿಗೆ ಶಿವಪ್ರಸಾದಭೋಗದಿಂದುಂಟಾಗುವ ಫಲವನ್ನು ಹೇಳಲು ನನಗೆ ಸಾಮರ್ಥ್ಯವಿಲ್ಲವು. ಮತ್ತಂ ಸರಸ್ವತಿಗೂ, ಬೃಹಸ್ಪತಿಗೂ, ಸಾಮರ್ಥ್ಯವಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಕದಾಚಿದೀಶಪಾದಾಮ್ಬುನಿರ್ಮಾಲ್ಯಪರಿಮೇಳಿತಃ ||
ಪವನಃ ಪನ್ನಗೇಶೇನ ನಿಪೀತಃ ಪುಣ್ಯಶಾಲಿನಾ ||
ತೇನ ವಿಶ್ವಂಭರಾಭಾರಧುರೀಣತ್ವಮವಾಪಿತಮ್ ||
ಭೋಗೀಶ್ವರತ್ವ ಮಚಲ ಮೀಶಭೂಷಣತಾಪಿ ಚ ||
ಸರ್ವಜ್ಞತಾ ಚ ಸಞ್ಜಾತಾ ದೇವೇನ್ದ್ರ!ನ ಹಿ ಸಂಶಯಃ ||
ಸಾಕ್ಷಾತ್ಪ್ರಸಾದ ಭೋಗೇನ ಭಕ್ತೋ ಯಲ್ಲಭತೇ ಫಲಮ್ ||

ತದ್ವಕ್ತುಂ ನ ಹಿ ಮೇ ಶಕ್ತಿರ್ನ ಗಿರೋ ನ ಗಿರಾಂಪತೇಃ''

ಇದು ಮಹಾಭಾರತದಲ್ಲಿ ಹರಿವಂಶದಲ್ಲಿ ಪುರುಹೂತನಾರದ ಸಂವಾದವು.

ಶಿವನಿರ್ಮಾಲ್ಯವನ್ನು-ಭಕ್ತಿಯಿಂ ಕೂಡಿದವನಾಗಿ ಮಸ್ತಕದಿಂ ಧರಿಸಿದವನಿಂದ ಚಂದ್ರಶೇಖರನಾದ ಉಮಾಸಹಿತನಾದ ನಾನೇ ಧರಿಸಲ್ಪಟ್ಟೆನುಎಂಬಲ್ಲಿಸಾಕ್ಷಿಯು.-

"ಶಿರಸಾ ಧಾರಯೇದ್ಭಕ್ತ್ಯಾ ಯೋ ನಿರ್ಮಾಲ್ಯಮಲೋಭತಃ ||
ಅಹಮೇವ ಧೃತಸ್ತೇನ ಸೋಮಸ್ಸೋಮಕಳಾಧರಃ''

ಎಲೈ ನಾರದಮುನಿಯೇ! ಕೇಳು; ಪಾರ್ವತೀವಲ್ಲಭನಾದ ಪರಮೇಶ್ವರನ ನಿರ್ಮಾಲ್ಯವನ್ನು ಭಕ್ತಿಯಿಂದ ಶಿರಸ್ಸಿನಿಂ ಧರಿಸಿದವಂಗೆ-ಸಾವಿರ ರಾಜಸೂಯ ಯಾಗ ದಿಂದುಂಟಾಗುವ ಫಲವುಂಟಾಗುತ್ತದೆ. ಎಂಬಲ್ಲಿ ಸಾಕ್ಷಿಯು.—

"ನಿರ್ಮಾಲ್ಯಂ ಧಾರಯೇದ್ಭಕ್ತ್ಯಾ ಶಿರಸಾ ಪಾರ್ವತೀಪತೇಃ ||
ರಾಜಸೂಯಸಹಸ್ರಸ್ಯ ಫಲಂ ಭವತಿ ನಾರದ!''

ಭೂಮಿಯಮೇಲಿರುವ ಪುಣ್ಯತೀರ್ಥಂಗಳೂ, ಪುಣ್ಯಕರಗಳೂ ಮಙ್ಗಳಕರ ಗಳೂ ಆದ ನದಿಗಳೂ ನನ್ನ ಪಾದಗಳಲ್ಲಿ ಯಾವಾಗಲೂ ಇರುತ್ತವೆ. ಆಕಾರಣದಿಂದ ನನ್ನ ಪ್ರಸಾದವೂ, ಪಾದೋದಕವೂ, ನಿರ್ಮಾಲ್ಯವೂ, ಭಕ್ತಿಪೂರ್ವಕವಾಗಿ ಪ್ರಯತ್ನ ದಿಂ ಧರಿಸಲರ್ಹವಾದದ್ದು. ಎಂಬಲ್ಲಿ ಸಾಕ್ಷಿಯು.—

"ಪೃಥಿವ್ಯಾಂ ಯಾನಿ ತೀರ್ಥಾನಿ ಯಾ ನದ್ಯಃ ಪುಣ್ಯದಾಶ್ಶುಭಾಃ ||
ಮತ್ಪಾದಸ್ಥಾಪಿತಾ ನಿತ್ಯಂ ತಸ್ಮಾದ್ಧಾರ್ಯಂ ಪ್ರಸಾದಕಮ್ ||
ಪಾದೋದಕಂ ಚ ನಿರ್ಮಾಲ್ಯಂ ಭಕ್ತ್ಯಾ ಧಾರ್ಯಂ ಪ್ರಯತ್ನತಃ''

ಮತ್ತಮಾಶಿವನಿರ್ಮಾಲ್ಯವಂ ಧರಿಸಿದವರನ್ನು—ಮನೋವಾಕ್ಕಾಯಗಳಿಂ ಪು ಟ್ಟಿದ ದೋಷಗಳು ಮುಟ್ಟುವುದಿಲ್ಲವು. ಶಿವನ ನಿರ್ಮಾಲ್ಯಧಾರಣವೂ, ಪಾದೋದಕ ಪಾನವೂ, ಪ್ರಸಾದಸ್ವೀಕಾರವೂ ಇವುಗಳಲ್ಲಿ ಒಂದೊಂದೇ ಸಮಸ್ತ ಪಾಪಗಳನ್ನು ಕೆಡಿಸತಕ್ಕವುಗಳಾಗಿರುತ್ತವೆ. ನಿರ್ಮಾಲ್ಯವಂ ಶಿರಸ್ಸಿನಿಂದ ಧರಿಸಿ, ಪಾದೋದಕವಂ ಪಾನಮಾಡಿ, ಪ್ರಸಾದವಂ ಬುಂಜಿಸಿದೊಡೆ, ಗಣೇಶ್ವರತ್ವವನ್ನು ಪಡೆಯುವನು. ನಿಶ್ಚ ಯವು. ಎಂಬಲ್ಲಿ ಸಾಕ್ಷಿಯು.—

"ನ ತಂ ಸ್ಪೃಶನ್ತಿ ಪಾಪಾನಿ ಮನೋವಾಕ್ಕಾಯಜಾನಿ ಚ ||
ನಿರ್ಮಾಲ್ಯಧಾರಣಂ ಶಮ್ಭೋಃ ಪಾದೋದಕನಿಷೇವಣಮ್ ||
ಪ್ರಸಾದಭೋಜನಂ ಚೇತಿ ಪ್ರತ್ಯೇಕಂ ಪಾಪನಾಶಕಮ್ ||
ನಿರ್ಮಾಲ್ಯಂ ಶಿರಸಾ ಧೃತ್ವಾ ಪೀತ್ವಾ ಪಾದೋದಕಂ ಶುಭಮ್''||

ಭುಕ್ತ್ವಾ ನಿವೇದಿತಂ ಭಕ್ತ್ಯಾ ಗಾಣಾಪತ್ಯಂ ಲಭೇದ್ಧ್ರುವಮ್ "

ಶಿವನ ನಿರ್ಮಾಲ್ಯವು—ಉತ್ಕೃಷ್ಟವಾದ ಪುಣ್ಯವನ್ನುಂಟುಮಾಡತಕ್ಕದ್ದು. ಶಿವನ ಪ್ರಸಾದವು-ಪಾಪವಂ ಕೆಡಿಸತಕ್ಕದ್ದು. ಬ್ರಹ್ಮಚಾರಿಗಳಿಗೂ, ಗೃಹಸ್ಥರಿಗೂ, ಸನ್ಯಾಸಿಗಳಿಗೂ ಭೋಗಮೋಕ್ಷಪ್ರದವಾದದ್ದು. ನಿರ್ಮಾಲ್ಯವು ಪರಮಾನಂದವನ್ನೂ ಶಿವಜ್ಞಾನವನ್ನೂ ಉಂಟುಮಾಡತಕ್ಕದ್ದು. ಉತ್ಕೃಷ್ಟಜ್ಞಾನಸ್ವರೂಪವಾದದ್ದು. ಅಮೃತಸ್ವರೂಪವಾದದ್ದು. ನಿರ್ಮಲವಹತನದತ್ತಣಿಂ ನಿರ್ಮಾಲ್ಯವೆಂದೆನಿಸಿಕೊಂಡಿತು. ಆದ್ದರಿಂದ ಮಾನವರ ಮನೋನೈರ್ಮಲ್ಯಕ್ಕೆ ಕಾರಣಮಾಗಿರುತ್ತದೆ. ಎಂಬಲ್ಲಿ ಸಾಕ್ಷಿಯು.—

" ನಿರ್ಮಾಲ್ಯಂ ಪರಮಂ ಪುಣ್ಯಂ ನೈವೇದ್ಯಂ ಪಾಪನಾಶನಮ್ ||
ಬ್ರಹ್ಮಚಾರಿಗೃಹಸ್ಥಾನಾಂ ಯತೀನಾಂ ಭುಕ್ತಿಮುಕ್ತಿದಮ್ ||
ನಿರ್ಮಾಲ್ಯಂ ಪರಮಂ ಜ್ಞಾನಂ ನಿರ್ಮಾಲ್ಯಂ ಪರಮಾಮೃತಂ ||
ನಿರ್ಮಲತ್ವಾಚ್ಚ ನಿರ್ಮಾಲ್ಯಂ ನೃಣಾಂ ನೈರ್ಮಲ್ಯಕಾರಣಮ್ "

ಎಲೈ ಪಾರ್ವತಿಯೇ ! ಲೋಕದಲ್ಲಿ ತನಗೆ ಹಿತಕರವಾದ ಪದಾರ್ಥವನ್ನು ನಿರ್ವಂಚನೆಯಿಂದ ಲಿಂಗಕ್ಕರ್ಪಿಸಿದೊಡೆ ಸಂತುಷ್ಟನಾಗುವೆನು, ಎಂಬಲ್ಲಿ ಸಾಕ್ಷಿಯು.

" ಯದ್ಯದಾತ್ಮಹಿತಂ ಲೋಕೇ ತತ್ತದ್ರವ್ಯಮವಞ್ಚಯನ್ ||
ಇಷ್ಟಲಿಙ್ಗಾರ್ಪಿತಂ ಕುರ್ಯಾದ್ಯದಿ ತುಷ್ಯಾಮಿ ಪಾರ್ವತಿ !"

ಶಿವನಿಂದ ಸೇವಿಸಲ್ಪಟ್ಟ ನಿರ್ಮಾಲ್ಯವು-ಪವಿತ್ರವಾದುದರಿಂದಲೇ ಪಾಪನಾಶಕವಾದದ್ದು. ಆದ್ದರಿಂದ ಶಿವಪ್ರಸಾದವಂ ಬುಂಜಿಸಿದೊಡೆ, ಪಾನಮಾಡಿದೊಡೆ, ಶಿವನೊಡನೆ ಸಂತೋಷಪಡುತ್ತಾನೆ. ಎಂಬಲ್ಲಿ ಸಾಕ್ಷಿಯು.—

" ಶಿವೋಪಭುಕ್ತ ನಿರ್ಮಾಲ್ಯಂ ಪವಿತ್ರಂ ಪಾಪನಾಶನಮ್ ||
ತಸ್ಮಾದ್ಭುಕ್ತ್ವಾ ಚ ಪೀತ್ವಾ ಚ ಶಿವೇನ ಸಹ ಮೋದತೇ "

ಶಿವನಿಂದ ಅನುಭವಿಸಲ್ಪಟ್ಟ ಸಕಲ ವಿಧವಾದ ಶೇಷ ಪ್ರಸಾದವು ಪವಿತ್ರತಮವಾದದ್ದು. ಅದರಲ್ಲಿ ಭೋಜ್ಯ, ಧಾರ್ಯವೆಂದೆರಡು ಭೇದಗಳಿರುತ್ತವೆಯೆಂದು ಶಿವಾಚಾರ್ಯರು ಹೇಳುತ್ತಾರೆ. ಭೋಜ್ಯವು—ಭಕ್ಷ್ಯ, ಲೇಹ್ಯ, ಪಾನೀಯ ಮೊದಲಾದವುಗಳಿಗುಪಲಕ್ಷಕವು. ಧಾರ್ಯವು—ವಸ್ತ್ರ, ಅಲಙ್ಕಾರ ಮೊದಲಾದವುಗಳಿಗುಪಲಕ್ಷಕವು. ಎಂದು ಹೇಳಲ್ಪಡುತ್ತದೆ. ಎಂಬಲ್ಲಿ ಸಾಕ್ಷಿಯು.—

" ಶಿವಾನುಭುಕ್ತಮಖಿಲಂ ನಿರ್ಮಾಲ್ಯಮತಿಪಾವನಮ್ ||
ಭೋಜ್ಯಂ ಧಾರ್ಯಮಿತಿ ದ್ವೇಧಾ ಶಿವಾಚಾರ್ಯೈಃ ಪ್ರಕೀರ್ತಿತಮ್ ||
ತತ್ರ ಭೋಜ್ಯಂ ಭಕ್ಷ್ಯಲೇಹ್ಯಪೇಯಾದೇರುಪಲಕ್ಷಣಮ್ ||
ಧಾರ್ಯಂ ವಾಸೋ ವಿಭೂಷಾದೇರುಪಲಕ್ಷಣಮುಚ್ಯತೇ "

ಈ ಅರ್ಥದಲ್ಲಿ " ನಿರ್ಮಾಲ್ಯಂ ದ್ವಿವಿಧಂ ಪ್ರೋಕ್ತಮನ್ನಪಾನಾದಿ ಭೂಷಣಮ್ " ಎಂದು ಸ್ಕಾಂದಪುರಾಣ ವಚನವೂ ಪ್ರಮಾಣವಾಗಿರುತ್ತದೆ.

ಫಲಗಳನ್ನೂ, ಪುಷ್ಪಗಳನ್ನೂ, ಪರಿಮಳದ್ರವ್ಯಗಳನ್ನೂ, ವಸ್ತ್ರಗಳನ್ನೂ, ಆಭರಣಗಳನ್ನೂ ಇಷ್ಟಲಿಙ್ಗಕ್ಕರ್ಪಿಸದೆ ಸ್ವೀಕರಿಸಿದವನೂ ಪಾಪಿಯಾಗುವನೆಂಬಲ್ಲಿ ಸಾಕ್ಷಿಯು.—

" ಫಲಂ ಪುಷ್ಪಂ ಸುಗನ್ಧಂ ಚ ವಸ್ತ್ರಾಣ್ಯಾಭರಣಾನಿ ಚ ||
ಲಿಙ್ಗೇಽರ್ಪಯಿತ್ವಾ ಸ್ವೀಕುರ್ಯಾದನ್ಯಥಾ ಕಿಲ್ಬಿಷೀ ಭವೇತ್ "

ಅನ್ನ ಮೊದಲಾದುದೂ, ಕಜ್ಜಾಯ ಮೊದಲಾದುದೂ, ಚೋಷ್ಯ ಮೊದಲಾದುದೂ, ಲಿಙ್ಗಾರ್ಪಿತವಾದೊಡೆ; ಸ್ವೀಕರಿಸಲರ್ಹವಾದದ್ದು. ಹಾಗಲ್ಲದೆ, ತನಗೆ ಬೇಕಾದುದನ್ನು ಸೇರಿಸಿದೊಡೆ; ಪ್ರಸಾದವು—ಫಲದಾಯಕವಾಗುವುದಿಲ್ಲವು. ಎಂಬಲ್ಲಿ ಸಾಕ್ಷಿಯು.—

" ಭೋಜ್ಯಂ ಲೇಹ್ಯಂ ಚ ಚೋಷ್ಯಂ ಚೇದ್ಯತ್ತಲ್ಲಿಙ್ಗಾರ್ಪಿತಂ ಶುಭಮ್ ||
ನೋಚೇದಿಷ್ಟಾನ್ನಮಿಶ್ರಸ್ತು ಪ್ರಸಾದೋ ನಿಷ್ಫಲೋ ಭವೇತ್ "

ಶ್ರೇಷ್ಠವಾದ ಶಿವಪ್ರಸಾದದೊಡನೆ ಅರ್ಪಿತವಲ್ಲದುದನ್ನು ಬಹಳವಾದರೂ, ಸ್ವಲ್ಪವಾದರೂ, ಕೂಡಿಸಿ ಬುಂಜಿಸಿದವನು—ಮಹಾಪಾಪಿಯಾಗುವನು. ಎಂಬಲ್ಲಿ ಸಾಕ್ಷಿಯು.—

" ಬಹ್ವಪಿ ಸ್ತೋಕಮಾತ್ರಂ ವಾ ಶಿವಾನ್ನೇನ ವಿಮಿಶ್ರಿತಮ್ ||
ಅನರ್ಪಿತಂ ತು ಭುಞ್ಜಾನಸ್ಸ ಏವೋನ್ನತಕಿಲ್ಬಿಷೀ "

ಭೋಜ್ಯ, ಭಕ್ಷ್ಯ, ಪಾನೀಯ ಮೊದಲಾದ ಅನ್ನಗಳು—ಶಿವನಿಗೆ ಸಮರ್ಪಿಸಲು ಯೋಗ್ಯಗಳು. ಆ ಪ್ರಸಾದವನ್ನು ಭೃತ್ಯಭಾವದಿಂದ ಬುಂಜಿಸಬೇಕೆಂಬಲ್ಲಿ ಸಾಕ್ಷಿಯು.—

" ಖಾದ್ಯಾನಿ ಚಾದನೀಯಾನಿ ಪೇಯಾದ್ಯನ್ನಾನಿ ಯಾನಿ ಚ ||
ದೇಯಾನಿ ತಾನಿ ವೈ ತಸ್ಮೈರ್ಭೀರಶ್ನೀಯಾದ್ದಾಸಭಾವತಃ "

ಶಿವನಿಗೆ ಸಮರ್ಪಿತವಾದ ಪ್ರಸಾದಾನ್ನವು—ಅನರ್ಪಿತವಾದ ಅನ್ನದಿಂ ಮಿಶ್ರಿತವಾದರೆ, ಆ ಅರ್ಪಿತವಾದುದೂ ಅನರ್ಪಿತವೇ ಆಗುವುದು. ಅದನ್ನು ತಿಂದವನು—ಪಾಪವನ್ನೇ ತಿಂದವನಾಗುವನು ಎಂಬಲ್ಲಿ ಸಾಕ್ಷಿಯು.—

" ಅನರ್ಪಿತೇನ ಸಂಮಿಶ್ರಮರ್ಪಿತಂ ಚಾಪ್ಯನರ್ಪಿತವತ್ ||
ಯೋಭುಂಕ್ತೇ ಹಿ ತದೇವಾನ್ನಂ ಕಿಲ್ಬಿಷಾಶೀ ಭವೇನ್ನರಃ "

ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ ಮೊದಲಾದವುಗಳೆಲ್ಲವೂ ಇಷ್ಟಲಿಜ್ಗಕ್ಕೆ ಅರ್ಪಿತವಾದರೆ, ಸ್ವೀಕರಿಸಲರ್ಹವಾಗಿರುತ್ತವೆ. ಸ್ವೇಷ್ಟಲಿಜ್ಗಪ್ರಸಾದ ಸ್ವೀಕಾರವು ಪ್ರಸಾದಾಪ್ತಿಯೆಂದು ನಿರೂಪಿತವಾಗಿರುತ್ತದೆ. ಎಂಬಲ್ಲಿ ಸಾಕ್ಷಿಯು.-

" ಭೋಜ್ಯಾ ಲೇಹ್ಯಾಶ್ಚ ಚೋಷ್ಯಾಶ್ಚ ಯೇಚ ಲಿಜ್ಗಾರ್ಪಿತಾಃಪರೇ ||
ಲಿಂಗೋಚ್ಛಿಷ್ಟನ್ತು ಭುಞ್ಜೀತ ಪ್ರಸಾದಾಪ್ತಿರುದಾಹೃತಾ "

ಕಬ್ಬನ್ನೂ, ಹಣ್ಣುಗಳನ್ನೂ ಕಜ್ಜಾಯ ಮೊದಲಾದ ಭಕ್ಷ್ಯಗಳನ್ನೂ, ಮೇಲೋಗರ ಮೊದಲಾದ ವ್ಯಂಜನಗಳನ್ನೂ, ಸ್ವೇಷ್ಟಲಿಜ್ಗಪ್ರಸಾದವಂ ಮಾಡಿಯೇ ಬುಂಜಿಸಬೇಕು. ಸ್ವೇಷ್ಟಲಿಜ್ಗಾರ್ಪಿತವಾಗದ ಪದಾರ್ಥಗಳು—ಗೋಮಾಂಸಕ್ಕೂ, ಅಮೇಧ್ಯಕ್ಕೂ ಸಮಾನವಾಗುವವೆಂಬಲ್ಲಿ ಸಾಕ್ಷಿಯು.—

" ಇಕ್ಷುದಣ್ಡ ಫಲಾಪೂಪಖಾದ್ಯಾನಿ ವ್ಯಞ್ಜನಾನಿ ಚ ||
ಪ್ರಸಾದಿತಾನಿ ಭುಞ್ಜೀಯಾದನ್ಯದ್ಗೋಮಾಂಸವಿಟ್ಸಮಮ್ "

ಫಲಗಳನ್ನು ಹ್ಯಾಗೆ ಸಮರ್ಪಿಸಬೇಕೆಂದರೆ,—ಕಬ್ಬು, ಬಾಳೆಯಹಣ್ಣು ಮೊದಲಾದವುಗಳನ್ನು ಚೂರುಗಳನ್ನು ಮಾಡಿ, ಇಷ್ಟಲಿಜ್ಗಕ್ಕರ್ಪಿಸಬೇಕು. ದ್ರಾಕ್ಷಿ ಖರ್ಜೂರ, ಮಾವಿನಹಣ್ಣು ಮೊದಲಾದವುಗಳನ್ನು ಖಂಡಿಸದೆ, ಅರ್ಪಿಸಬೇಕು. ಎಂಬಲ್ಲಿ ಸಾಕ್ಷಿಯು.—

" ಇಕ್ಷುರಮ್ಭಾಫಲಾದೀನಿ ಸಖಣ್ಡಾನಿ ನಿವೇದಯೇತ್ ||
ದ್ರಾಕ್ಷಾಖರ್ಜೂರಚೂತಾದೀನ್ಯಖಣ್ಡಾನಿ ನಿವೇದಯೇತ್ "

— ಇದು ವೀರಶೈವಸಿದ್ಧಾನ್ತವು. —

ಇತಿ ಶ್ರೀಮತ್ಪರಶಿವಚರಣಕಮಲಾರಾಧಕನಾದ, ತತ್ಪ್ರಸಾದಾಸಾದಿತ ನಿರ್ಮಲ
ಜ್ಞಾನ ವೈಭವನಾದ, ನಿಖಿಲನಿಗಮಾಗಮೇತಿಹಾಸಸ್ಮೃತಿ ಪುರಾಣ
ಪದವಾಕ್ಯ ಪ್ರಮಾಣಪಾರಾವಾರ ಪಾರೀಣನಾದ, ನಿರಾಭಾರ
ವೀರಶೈವ ಸಾಮ್ರಾಜ್ಯಧುರನ್ಧರನಾದ, ತೋಂಟದಸಿದ್ಧೇ
ಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲ
ಕೌಮುದಿಯೊಳ್ ಅಷ್ಟಾವರಣಪ್ರಕರಣದಲ್ಲಿ
ಪ್ರಸಾದಸ್ಥಲನಿರೂಪಣಮ್.

---

ಷಟ್ಸ್ಥಲಕೌಮುದಿಯು ಸಂಪೂರ್ಣವಾದುದು.

ಓಂ ತತ್ಸತ್.

# ನಮ್ಮಲ್ಲಿ ಬೆಲೆಗೆ ದೊರೆಯುತಕ್ಕ ವೀರಶೈವಮತಗ್ರನ್ಥಗಳು.



ಷಟ್ಸ್ಥಲಕೌಮುದಿಯು—ಷಟ್ಸ್ಥಲಪ್ರಕರಣ, ಅಷ್ಟಾವರಣಪ್ರಕರಣ ಎಂಬೆರಡು ಪ್ರಕರಣಗಳಿಂದ ಕೂಡಿರುತ್ತದೆ. ಕನ್ನಡ ಭಾಷೆಯಿಂದ ವೀರಶೈವಸಿದ್ಧಾನ್ತವನ್ನು ಸಪ್ರಮಾಣವಾಗಿ ಚೆನ್ನಾಗಿ ನಿರೂಪಿಸುತ್ತದೆ.

ಪ್ರತಿ ೧ಕ್ಕೆ ಬೆಲೆ ೦-೮-೦

ಪರಮಾತ್ಮಪ್ರಕಾಶಿಕೆ—ಸ್ವಸ್ವರೂಪಪ್ರಕಾಶಿಕಾ ಎಂಬ ಗ್ರನ್ಥದಿಂದಕೂಡಿರುತ್ತದೆ. ದೀಕ್ಷೆ, ಷಟ್ಸ್ಥಲ, ಪಂಚವಿಧಯೋಗ ವಿಚಾರಗಳನ್ನು ಸಪ್ರಮಾಣವಾಗಿ ಕನ್ನಡ ವಚನರೂಪದಿಂದ ನಿರೂಪಿಸತಕ್ಕುದಾಗಿದೆ. ಪ್ರತಿ ೧ ಕ್ಕೆ ಬೆಲೆ ೦-೪-೦.

ಶ್ರುತಿಸಾರಭಾಷ್ಯಂ —೭೫ ವೇದಮನ್ತ್ರಗಳಿಗೆ ವೀರಶೈವಮತಪರವಾದ ಅರ್ಥವನ್ನು ನಿರೂಪಿಸುತ್ತದೆ. ಪ್ರತಿ ೧ಕ್ಕೆ ಬೆಲೆ ೦-೫-೦

ವೀರಶೈವಷಟ್ಸ್ಥಲಸಿದ್ಧಾನ್ತವು—ಅಷ್ಟಾವರಣಪಂಚಾಚಾರಾದಿ ವಿಚಾರಗಳನ್ನು ಕನ್ನಡಪದ್ಯರೂಪದಿಂದ ಹೇಳತಕ್ಕುದಾಗಿದೆ. ಪ್ರತಿ ೧ಕ್ಕೆ ಬೆಲೆ ೦-೩-೦

ಶಿವಸ್ತವಶಿರೋಮಣಿಯು—ಪಾರಾಯಣಕ್ಕೆ ಅನುಕೂಲವಾಗಿರುವ ಸ್ತೋತ್ರವು. ಕನ್ನಡ ಟಿಪ್ಪಣದಿಂದ ಕೂಡಿರುತ್ತದೆ. ಪ್ರತಿ ೧ಕ್ಕೆ ಬೆಲೆ ೦-೨-೬

ಪುರುಷಸೂಕ್ತವು—ನಿರಂಜನ ಜಂಗಮಪರವಾದ ಕನ್ನಡ ಟೀಕೆಯುಳ್ಳುದಾಗಿದೆ. ಪ್ರತಿ ೧ಕ್ಕೆ ಬೆಲೆ ೦-೨-೦

ಅಂಚೆವೆಚ್ಚವು ಬೇರೆ.

